# ಶೂದ್ರ

ಸಂಪಾದಕ : ಎಂ. ಶ್ರೀನಿವಾಸ್



"The Party was never built, She thought her mass Popularity, like Cleopatra's beauty, would never wither, and with that Capital, she would smoothly get on, weilding power"

—Nikhil Chakravarthy

ಈ ಸಂಚಿಕೆಯಲ್ಲಿ


ಕೆ. ಸತ್ಯನಾರಾಯಣ

ಸಿ. ಎಸ್. ಲಕ್ಷ್ಮಿ

ಕೆ. ಎನ್. ಶಶಿಪ್ರಭ

ಕುಂ. ವೀರಭದ್ರಪ್ಪ

ಕೆ. ಎಸ್. ಶ್ರೀನಿವಾಸ ಮೂರ್ತಿ

ಜಿ. ರಾಮಕೃಷ್ಣ

ಐ. ಆರ್. ಪ್ರಮೋದ್

ಪಿ. ಲಂಕೇಶ್

ಶಿವಪ್ರಕಾಶ

ಪದ್ಮರಾಜ ದಂಡಾವತಿ

[illegible] ಶ್ರೀನಿವಾಸ್


ಬೆಲೆ : ೧ ರೂ.

# ಶೂದ್ರ

ಸಂಪುಟ : 5 ಫೆಬ್ರುವರಿ 1980 ಸಂಚಿಕೆ : 4

ಸಹಾಯಕ ಸಂಪಾದಕರು : ಪದ್ಮರಾಜ ದಂಡಾವತಿ, ಗೋ. ಶ್ರೀನಿವಾಸ್
ಮಂಜು, ಸಾರಕ್ಕಿ ವಿಶ್ವನಾಥ್
ಎಂ. ವೈ. ನಾಗರಾಜ್, ನಿರ್ಮಲ ಎಸ್. ರೆಡ್ಡಿ

ಮುಖ ಚಿತ್ರ : ದೇವಿಡ್ ಲಿವಿನ್ (ದೆಬನಾರ್ ಪತ್ರಿಕೆ)

ಓದಿ :

ಚಲನ (ತ್ರೈಮಾಸಿಕ)
ಅಂಕಣ (ದ್ವೈಮಾಸಿಕ)
ಪಂಚಮ (ಪಾಕ್ಷಿಕ)
ಮಂಥನ (ಅನಿಯತ ಕಾಲಿಕ)

## ಅಭಿವ್ಯಕ್ತಿ ವಿಚಾರ ವೇದಿಕೆಗೆ ಸದಸ್ಯರಾಗಿ

- ಶೂದ್ರಕ್ಕೆ ಚಂದಾ ಕಳಿಸಿ ಕೊಡಿ
- ನಿಮ್ಮ ಗೆಳೆಯರನ್ನು ಶೂದ್ರ ಬಳಗಕ್ಕೆ ಸೇರಿಸಿ.
- ಕತೆ, ಕವನ ಮತ್ತು ಲೇಖನಗಳಿಗೆ ಸ್ವಾಗತ,

ವಿಳಾಸ : ಶೂದ್ರ ಶ್ರೀನಿವಾಸ್
ನಂ. 29, ವೆಂಕಟೇಶ್ ಬಿಲ್ಡಿಂಗ್ ಹೊಸೂರು ರಸ್ತೆ
ನ್ಯೂ ಎಕ್ಸ್‌ಟೆನ್‌ಷನ್, ಮಡಿವಾಳ, ಬೆಂಗಳೂರು–560068.

ವಾರ್ಷಿಕ ಚಂದಾ 12ರೂ

# ಸಮಾಜವಾದ ಮತ್ತು ಮಾನವತಾವಾದ

**ಕೆ. ಸತ್ಯನಾರಾಯಣ**

ಸಾರ್ವಜನಿಕ ಜೀವನದಲ್ಲಿ ಪದಗಳು ಬೇಜವಾಬ್ದಾರಿ ಯಾಗಿ ಹೇಗೆ ಉಪಯೋಗಿಸಲ್ಪಡುತ್ತವೆ. ಎಂಬುದಕ್ಕೆ ಮಾನವತಾವಾದ ಎಂಬ ಪದಕ್ಕೆ ನಮ್ಮಲ್ಲಿರುವ ವೈವಿಧ್ಯಮಯ ಪ್ರತಿಕ್ರಿಯೆಗಳೆಯೆ ಸಾಕ್ಷಿಯಾಗಿವೆ. ಅನ್ನ ಸಂತರ್ಪಣೆಯಲ್ಲಿ ಆಗಾಗ್ಗೆ ನಿರತರಾಗುವ ಶ್ರೀಮಂತರು-ತಮ್ಮ ಅಹಂಕಾರ ತೃಪ್ತಿಗಾಗಿ, ಶ್ರೀಮಂತಿಕೆಯ ಪ್ರದರ್ಶನಕ್ಕಾಗಿ ದಾನ ಧರ್ಮ ಮಾಡುವ ರೋಟರಿ ಲಯನ್ಸ್ ಮಂದಿಗಳು ತಾವು ಮಾನವತಾವಾದಿಗಳೆಂದು ತಮಗೆ ಮನುಷ್ಯರ ಬಗ್ಗೆ ಅಪಾರ ಅನುಕಂಪೆ ಪ್ರೀತಿಯಿದೆಯೆಂದು ತಿಳಿದು ಕೊಂಡಿರುತ್ತಾರೆ. ಈ ಪದವನ್ನೆ ಗುಮಾನಿಯಿಂದ ನೋಡುವ ಕ್ರಾಂತಿಕಾರಿಗಳೆನಿಸಿಕೊಂಡ ಜನ ಮಾನವತಾವಾದವೆಂದರೆ ಆಳುವ ಮಂದಿ ಇಲ್ಲದವರುನ್ನು ಈಗ ಇರುವ ಸ್ಥಿತಿಯಲ್ಲೆ ಇಡಲು ಮಾಡುವ ಉಪಾಯ ಮತ್ತು ಕುಟಿಲತೆಗಳ ಮೊತ್ತ ಎಂದು ತಿಳಿದುಕೊಂಡಿರುತ್ತಾರೆ. ಒಂದು ಪದ ಸಾರ್ವಜನಿಕ ಜೀವನದಲ್ಲಿ ಈ

---

ಡಾ॥ ಎರಿಕ್ ಫ್ರೋಮ್‌ರವರು ಮನಶಾಸ್ತ್ರಜ್ಞನಾಗಿ ಮತ್ತು ತತ್ವಜ್ಞಾನಿಯಾಗಿ ಸಾಧಿಸಿರುವುದು ಅಪಾರ. ಹುಟ್ಟಿದ್ದು 1900 ರಲ್ಲಿ. ಇವರು ಮನಶಾಸ್ತ್ರವನ್ನು ಮತ್ತು ಸಮಾಜ ಶಾಸ್ತ್ರವನ್ನು ಅಧ್ಯಯನ ಮಾಡಿದ್ದು ಹೈಡಲ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ. ತಮ್ಮ ಇಪತ್ತೆರಡನೆಯ ವಯಸ್ಸಿನಲ್ಲಿ ಪಿ. ಹೆಚ್. ಡಿ. ಯನ್ನು ಪಡೆದ ಮೇಲೆ ಯೂರೋಪ್ ಮತ್ತು ಅಮೇರಿಕದ ಬಹಳಷ್ಟು ವಿಶ್ವವಿದ್ಯಾಲಯಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

ಇವರ ಬಹು ಮುಖ್ಯಕೃತಿಗಳಾದ 'ಎಸ್‌ಕೇಪ್ ಫ್ರಮ್ ಫ್ರೀಡಂ', 'ಮ್ಯಾನ್ ಫಾರ್ ಹಿಮ್‌ಸೆಲ್ಫ್', 'ದಿ ಫರ್‌ಗಾಟನ್ ಲಾಂಗ್ವೇಜ್', 'ದಿ ಸೇನ್ ಸೊಸೈಟಿ', 'ದಿ ಆರ್ಟ್ ಆಫ್ ಲವಿಂಗ್', 'ದಿ ಕ್ರೈಸಿಸ್ ಆಫ್ ಸೈಕೋ ಅನಾಲಿಸಿಸ್, ಟು ಹ್ಯಾವ್ ಆರ್ ಟು ಬಿ 'ಫಿಯರ್ ಆಫ್ ಫ್ರೀಡಂ' ಮತ್ತು 'ದಿ ಅನಾಟಮಿ ಆಫ್ ಹ್ಯೂಮನ್ ಡಿಸ್ಟ್ರಕ್ಟೀವ್‌ನೆಸ್'.

ಪ್ರಸ್ತುತ ಲೇಖನ ಫ್ರೊಮರ 'ಸೋಷಿಯಲಿಸ್ಟ್ ಹ್ಯುಮ್ಯಾನಿಸಂ' ನಲ್ಲಿಯ ಚರ್ಚೆಯನ್ನು ಕುರಿತದ್ದಾಗಿದೆ. ಇಲ್ಲಿ ರಾಜಕೀಯಕ್ಕೆ ಮತು ಸಮಾಜಕ್ಕೆ ಸಂಬಂಧಿಸಿದ ಚರ್ಚೆ ಅರ್ಥಪೂರ್ಣವಾದದ್ದು. ಸತ್ಯನಾರಾಯಣರವರು ಮೂಲ ಲೇಖಕರಿಗೆ ಧಕ್ಕೆ ಬರದಂತೆ ಸಂಗ್ರಹಿಸಿ ಕೊಟ್ಟಿದ್ದಾರೆ.

—ಸಂ :

ರೀತಿ ಬೇಜವಾಬ್ದಾರಿಯಾಗಿ ಉಪಯೋಗಿಸಲ್ಪಡಲು ಮುಖ್ಯ ಕಾರಣ ಅದನ್ನು ಉಪಯೋಗಿಸುವವರ ನೈತಿಕ ಭ್ರಷ್ಟತೆ ಅಥವಾ ಬೌದ್ಧಿಕ ಲಂಪಟತನವೆ ಕಾರಣ ಎನ್ನು ವಂತೆ ಅರ್ಥ ಬರುವಂತ ಮಾತನ್ನು ಗಾಂಧೀಜಿ ಒಂದು ಕಡೆ ಹೇಳಿದ್ದಾರೆ.

ಆದರೆ ಮಾನವತಾವಾದ ಎಂಬ ಪದಕ್ಕೆ ತನ್ನದೇ ಆದ ವಿಶಿಷ್ಟ ಅರ್ಥವಿದೆ ಅದು ಮುಖ್ಯವಾಗಿ ಮನುಷ್ಯ ತನ್ನನ್ನು ತಾನು ಬದಲಾಯಿಸಿ ಕೊಳ್ಳುವ ಬಗ್ಗೆ, ಮತ್ತು ಈ ಜಗತ್ತನ್ನು ಬದಲಾಯಿಸುವ ಬಗ್ಗೆ ಮನಷ್ಯನಿಗಿರುವ ಶಕ್ತಿ ಸಾಮರ್ಥ್ಯಗಳನ್ನು ನಂಬುವುದು ಮತ್ತು ಭರವಸೆ ಗೌರವಗಳನ್ನು ಇಟ್ಟುಕೊಳ್ಳುವುದೆ ಆಗಿದೆ. ಮನುಷ್ಯನ ಬಗ್ಗೆ ನಾವು ತಳೆಯುವ ಭರವಸೆ, ನಂಬಿಕೆ, ಪ್ರೀತಿ, ಗೌರವ ಇವುಗಳೆಲ್ಲ ಮಾನವ ತಾವಾದದಲ್ಲಿ ವ್ಯಕ್ತವಾಗುತ್ತವೆ. ಹಾಗಾಗಿ ಮಾನವತಾವಾದ ದಾನ ಧರ್ಮವಾಗಲಿ ಕ್ರಾಂತಿ ಕಾರಿಗಳು ಗುಮಾನಿಯಿಂದ ನೋಡಬೇಕಾದ ಪದವಾಗಲಿ ಖಂಡಿತ ಅಲ್ಲ. ಮನುಷ್ಯನ ಶಕ್ತಿಸಾಮರ್ಥ್ಯಗಳ ಬಗ್ಗೆ ಇರುವ ನಂಬಿಕೆ ಮತ್ತು ಭರವಸೆಗಳನ್ನೆ ಗಣನೆಗೆ ತೆಗೆದು ಕೊಳ್ಳುವುದಾದರೆ ನಮ್ಮಲ್ಲಿ ಎಷ್ಟೋ ಜನ ಮಾನವತಾವಾದಿಗಳಲ್ಲ ಎಂಬ ಅರ್ಥದ ಮಾತನ್ನು ಇಲ್ಲಿಯ ಒಬ್ಬ ಪ್ರಬಂಧಕಾರ ಹೇಳುತ್ತಾನೆ. ನಾವೇಕೆ ಜನತೆ ಯಲ್ಲಿ ಅಷ್ಟು ನಂಬಿಕೆ ಭರವಸೆಗಳನ್ನು ಇಡದೆ ನಮ್ಮ ಶಕ್ತಿ ಸಾಮರ್ಥ್ಯಗಳಲ್ಲೆ ನಂಬಿಕೆ ಇಟ್ಟುಕೊಳ್ಳುತ್ತೇವೆ ಎಂಬುದಕ್ಕೆ ಜೆ. ಪಿ. ಒಂದು ಮಾರ್ಮಿಕವಾದ ಉತ್ತರ ನೀಡಿ ದ್ದರು. ನಮ್ಮಲ್ಲೆ ನಮಗೆ ನಂಬಿಕೆ ಇಲ್ಲ. ಆದ್ದರಿಂದ ನಾವು ಜನತೆಯನ್ನು ನಂಬುವು ದಿಲ್ಲ.

ಮಾನವತಾವಾದಕ್ಕೆ ಇರುವ ಈ ವಿಶಾಲ ಅರ್ಥದಲ್ಲಿ ಸಮಾಜವಾದ ಮತ್ತು ಮಾನವತಾವಾದಕ್ಕು ಇರುವ ಸಂಬಂಧ ಎಂತಹದೆಂದು, ಮನುಷ್ಯನ ಬಗ್ಗೆ ಸಮಾಜ ವಾದದ ಧೋರಣೆಯೇನು ಮಾರ್ಕ್ಸ್‌ಗೆ ಮನುಷ್ಯನ ಬಗ್ಗೆ ಇದ್ದ ಕಲ್ಪನೆ ಎಂತಹದು? ಇಂತಹ ಕೆಲವು ಮುಖ್ಯ ಪ್ರಶ್ನೆಗಳನ್ನೂ ಈ ಗ್ರಂಥದಲ್ಲಿ ಪರಿಶೀಲಿಸಲಾಗಿದೆ.

ಮಾನವತಾವಾದವಿಲ್ಲದೆ ಸಮಾಜವಾದವಿಲ್ಲ. ಇದನ್ನು ಈ ಗ್ರಂಥದ ಎಲ್ಲ ಲೇಖಕರು ಪ್ರಸ್ತಾಪಿಸಿದ್ದಾರೆ. ಯುರೋಪಿನಲ್ಲಿ ಹದಿನೈದನೆಯ ಶತಮಾನದಲ್ಲಾದ *Renaissance*ನ ಅತಿ ಮುಖ್ಯ ಅನ್ವೇಷಣೆಯೆಂದರೆ 'ಮನುಷ್ಯನೆ' ಏಕೆಂದರೆ ನಂತರವೆ ಅವನಿಗೆ ಎಲ್ಲ ಸಾಮಾಜಿಕ–ಸಾಂಸ್ಕೃತಿಕ ಅಧ್ಯಯನಗಳಲ್ಲಿ ಪ್ರಾಶಸ್ತ್ಯ ದೊರಕಿದ್ದು. ಮನುಷ್ಯ ಈ ರೀತಿಯ ಅಧ್ಯಯನಗಳ ಕೇಂದ್ರ ಬಿಂದುವಾದದ್ದು. ಮನುಷ್ಯನ ಬಗ್ಗೆ, ಆತನ ಸಾಧ್ಯತೆಗಳ ಬಗ್ಗೆ, ಆತನ ಸಾಧ್ಯತೆಗಳು ನಿಜವಾಗುವಂತಹ ಅವಕಾಶಗಳ ಬಗ್ಗೆ ಹೆಚ್ಚು ಗಂಭೀರವಾದ ಅಧ್ಯಯನ ಪ್ರಾರಂಭವಾದದ್ದು. ಸಮಾಜ ವಾದ ಕೂಡ ಯುರೋಪಿನ *Renaissance* ಸಂಪ್ರದಾಯದಲ್ಲೆ ಬೆಳೆದು ಬಂದ ಒಂದು ಪ್ರಮುಖ ಚಿಂತನ ಮಾರ್ಗ ಸಮಾಜವಾದ ಕೂಡ ಮನುಷ್ಯನಿಗೆ ಚರಿತ್ರೆಯ

ವಿವಿಧ ಘಟ್ಟಗಳಲ್ಲಿ ದಕ್ಕುವ ಸಾಧ್ಯತೆಗಳನ್ನು ಈ ಸಾಧ್ಯತೆಗಳನ್ನು ಹೆಚ್ಚಿಸುವ ಕ್ರಮ ವನ್ನು ಕುರಿತ ಚಿಂತನೆಯಾದ್ದರಿಂದ ಅದು ಮಾನವತಾವಾದವನ್ನು ಬಿಡಲಾರದು.

ಮನುಷ್ಯನ ಬಗ್ಗೆ ಸಮಾಜವಾದಕ್ಕಿರುವ ಅನೇಕ ರೀತಿಯ ಉದಾತ್ತ ಕಲ್ಪನೆಗಳ ಪ್ರತಿನಿಧಿಯಾಗಿ ಮಾರ್ಕ್ಸ್ ಇಲ್ಲಿ ನಮಗೆ ಕಾಣಿಸಿಕೊಳ್ಳುತ್ತಾನೆ. ತನ್ನ ಹೈಸ್ಕೂಲ್ ದಿನಗಳಲ್ಲಿ ಬರೆದ ಒಂದು ಪ್ರಬಂಧದಲ್ಲಿ ಮಾರ್ಕ್ಸ್ 'ನಮ್ಮ ಘನತೆಗೆ ಒಗ್ಗದಂತಹ ಕೆಲಸ ಮಾಡುವುದು ತುಂಬಾ ಅಸಹ್ಯಕರ ಸಂಗತಿ' ಎಂದು ಬರೆದಿದ್ದನಂತೆ. ಹೈಸ್ಕೂಲ್ ದಿನಗಳಲ್ಲಿ ಮಾರ್ಕ್ಸ್ ಬರೆದ ಈ ವಾಕ್ಯ ಆತನ ಎಲ್ಲ ಕೃತಿಗಳ ಹಿಂದಿನ ಮೂಲ ಪ್ರೇರಣೆ ಯಾಯಿತು. ಮನುಷ್ಯ ತನ್ನ ಘನತೆಯನ್ನು ಉಳಿಸಿ ಕೊಂಡು ಸಂತೋಷದಿಂದ ಕೆಲಸ ಮಾಡುವುದು ಹೇಗೆ ತಾನು ಮಾಡುವ ಕೆಲಸದಲ್ಲಿ ತನ್ನ ವ್ಯಕ್ತಿತ್ವವನ್ನು ಅಭಿವ್ಯಕ್ತಿ ಗೊಳಿಸುವುದು ಹೇಗೆ. ಈ ರೀತಿ ಪ್ರತಿಯೊಬ್ಬವ್ಯಕ್ತಿಯು ತನ್ನ ವ್ಯಕ್ತಿತ್ವದ ಮುದ್ರೆ ಬೀಳುವಂತೆ ಕೆಲಸ ಮಾಡುವಂತಾಗಲು ಸಾಧ್ಯವಾಗುವಂತಹ ವ್ಯವಸ್ಥೆ ಯಾವುದು ಇದನ್ನ ಮಾರ್ಕ್ಸ್ ತನ್ನ ಬರವಣಿಗೆಯಲ್ಲಿ ಪರಿಶೀಲಿಸುವುದು.

ಚರಿತ್ರೆಯ ಚಲನೆಯನ್ನು ಅರ್ಥ ಪೂರ್ಣ ಮಾಡುವುದು ಮನುಷ್ಯನಿಗೆ ಮಾತ್ರ ಸಾಧ್ಯ ಎಂಬುದೆ ಮಾರ್ಕ್ಸ್‌ನ ಅಚಲವಾದ ನಂಬಿಕೆ. ಈ ರೀತಿ ಮಾಡುವುದು ಸಾಧ್ಯ ವಾಗುವುದು ಮನುಷ್ಯನಿಗೆ ತನ್ನ ಶಕ್ತಿ ಸಾಮರ್ಥ್ಯಗಳ ಅರಿವಿದ್ದಾಗ ಮಾತ್ರ ಎಂಬುದು ಮಾರ್ಕ್ಸ್‌ನ ಇನ್ನೊಂದು ಅಚಲವಾದ ನಂಬಿಕೆ. ಶ್ರಮ, ಅನಾಥೀಕರಣ *(Alienation)* ಮನುಷ್ಯ ಸ್ವಭಾವ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಾಧ್ಯವಾಗು ವಂತಹ ಮನುಷ್ಯ ಸಂಬಂಧಗಳು ಎಂತಹಂದು ಇವುಗಳ ಬಗ್ಗೆ ಮಾರ್ಕ್ಸ್ ವಿಚಾರ ಗಳನ್ನೂ ಪರಿಶೀಲಿಸಿದರೆ ಈ ಅಂಶ ಇನ್ನಷ್ಟು ಹೆಚ್ಚು ಸ್ಪಷ್ಟವಾಗುತ್ತದೆ.

ಮನುಷ್ಯನಿಗು ಪ್ರಾಣಿಗಳಿಗು ಕೆಲವು ಸಮಾನವಾದ ಪ್ರವೃತ್ತಿಗಳಿವೆ. (ಆಹಾರ ನಿದ್ರೆ, ಮೈಥುನ ಇತ್ಯಾದಿ). ಆದರೆ ಮನುಷ್ಯ ಪ್ರಾಣಿಗಿಂತ ಭಿನ್ನನು ಹೌದು. ಈ ರೀತಿಯ ಭಿನ್ನತೆ ಬರುವುದು ಮನುಷ್ಯನಿಗಿರುವ ಕೆಲಸ ಮಾಡುವ ಸಾಮರ್ಥ್ಯದಲ್ಲಿ ಮತ್ತು ಕೆಲಸ ಮಾಡುತ್ತಾ ಸೃಷ್ಟಿಸುವ ಸಾಮರ್ಥ್ಯದಲ್ಲಿ, ಮನುಷ್ಯ ತನಗು ಮತ್ತು ಪ್ರಾಣಿಗಿರುವ ವ್ಯತ್ಯಾಸವನ್ನು ಉಳಿಸಿಕೊಳ್ಳಬೇಕಾದರೆ ಅವನು ಮಾಡುವ ಕೆಲಸದಲ್ಲಿ, ಸೃಷ್ಟಿಸುವ ಪ್ರಕ್ರಿಯೆಯಲ್ಲಿ ಆತನ ವ್ಯಕ್ತಿತ್ವದ ಅಂಶ ಪ್ರಕಟವಾಗಲು ಅವಕಾಶ ಇರ ಬೇಕು. ಇಲ್ಲದಿದ್ದರೆ ಮನುಷ್ಯನಿಗೆ ಸಂತೋಷವಾಗುವುದಿಲ್ಲ. ಅವನು ತಾನು ಸಂತೋಷ ಪಡೆಯಲು ಪ್ರಾಣಿಗಳಿಗೂ ಮತ್ತು ತನಗೂ ಸಮಾನವಾದ ಪ್ರವೃತ್ತಿಗಳಿಗೆ ಮೊರೆ ಹೋಗ ಬೇಕಾಗುತ್ತದೆ.

ತನ್ನನ್ನು ಪ್ರಾಣಿಗಳಿಂದ ಭಿನ್ನ ಮಾಡುವ ಪ್ರವೃತ್ತಿಯಿಂದ ಸಂತೋಷ ಪಡ

ಳಾಗದ ಮನುಷ್ಯ ತನಗೂ ಮತ್ತು ಪ್ರಾಣಿಗಳಿಗು ಸಮಾನವಾದ ಚಟುವಟಿಕೆಯಿಂದಲೇ ಸಂತೋಷ ಪಡೆಯುವುದು ಮನುಷ್ಯನ ದೊಡ್ಡ ದುರಂತಗಳಲ್ಲೊಂದು ಎಂದು ಮಾರ್ಕ್ಸ್ ಅಭಿಪ್ರಾಯ.

ಇದು ಹೆಚ್ಚು ಸ್ಪಷ್ಟವಾಗುವುದು ಮಾರ್ಕ್ಸ್ ಅನಾಥೀಕರಣದ ಬಗ್ಗೆ ಬರೆಯುವಾಗ-ಮನುಷ್ಯನ ಬಗ್ಗೆ ಇದುವರೆಗೆ ಪ್ರಕಟವಾದ ಅತಿ ಮುಖ್ಯ ಸಂಶೋಧನೆಗಳಲ್ಲಿ ಮಾರ್ಕ್ಸ್‌ನ *Alienation* ಕಲ್ಪನೆ ಕೂಡ ಒಂದು. ಅನಾಥರಾಗುವುದು ಅನ್ಯರಾಗುವುದು, ನಾವೆಲ ತಿಳಿದು ಕೊಂಡಂತೆ ಆಧುನಿಕ ಮನುಷ್ಯನ ಹಣೆಬರಹವಲ್ಲ ಅದು ಎಲ್ಲ ಮನುಷ್ಯರ ದುರಂತ ಎನ್ನುತ್ತಾನೆ ಮಾರ್ಕ್ಸ್ ಮತ್ತು ಆ ದುರಂತವನ್ನು ಬದಲಾಯಿಸಲಿಕ್ಕೆ ಕೂಡ ಸಾಧ್ಯ ಎನ್ನುತ್ತಾನೆ.

ಮನುಷ್ಯ ಯಾವಾಗ ತನ್ನ ಸಂತೋಷಕ್ಕೆ ಕೆಲಸ ಮಾಡುವುದಿಲ್ಲವೋ, ಎಲ್ಲಿ ಆತನ ಜೀವನ ದ್ರವ್ಯಕ್ಕೆ ಮತ್ತು ಆತ ಮಾಡುವ ಕೆಲಸಕ್ಕೆ ಸಂಬಂಧವಿರುವುದಿಲ್ಲವೋ ಅಲ್ಲಿ ಮನುಷ್ಯ ತನ್ನ ಜೀವನ ದ್ರವ್ಯದಿಂದ, ತನ್ನ ಸಾಧ್ಯತೆಗಳಿಂದ ತಾನೆ ಅನಾಥನಾಗುತ್ತಾನೆ. ಆದರೆ ತಾನು ಸೃಷ್ಟಿಸಿದ ವಸ್ತು ಮತ್ತು ಯಂತ್ರಗಳ ಮೇಲೆ ತಾನೆ ಹತೋಟಿ ಕಳೆದು ಕೊಂಡು ಅದಕ್ಕೆ ಗುಲಾಮನಾಗುವುದು, ತಾನು ಸೃಷ್ಟಿಸಿದ ವಸ್ತು ತನ್ನದಲ್ಲದೆ ಇರುವುದು ಅನಾಥೀಕರಣದ ಇನ್ನೊಂದು ಮುಖ. ಅನಾಥೀಕರಣ ಹುಟ್ಟಿಕೊಳ್ಳುವುದು ಹೀಗೆ ಮನುಷ್ಯ ಶ್ರಮದಲ್ಲಿ ತೊಡಗುವ ಪ್ರಕ್ರಿಯೆಯಲ್ಲಿ ; ಕೇವಲ ಮನಸ್ಸಿನ ಕಲ್ಪನೆಯಿಂದಲ್ಲ.

ಇಲ್ಲಿಯ ಪ್ರಬಂಧಕಾರರು ಹೇಳಿರುವ ಹಾಗೆ ಈ ರೀತಿಯ ಅನಾಥೀಕರಣದಿಂದ ಮನುಷ್ಯನನ್ನು ತಪ್ಪಿಸುವುದೆ ಸಮಾಜವಾದ ಮತ್ತು ಮಾನವತಾವಾದದ ಮುಖ್ಯ ಉದ್ದೇಶವಾಗಬೇಕು. ಮಾರ್ಕ್ಸ್ ಇದು ಶ್ರಮವನ್ನು ತೊಡಗಿಸುವ ಪ್ರಕ್ರಿಯೆಯ ಮಾನವೀಕರಣದಿಂದ ಸಾಧ್ಯ ಎನ್ನುತ್ತಾನೆ. *(Humanisation of Labour Process)*. ಈ ರೀತಿಯ ಮಾನವೀಕರಣದ ಒಟ್ಟು ಉದ್ದೇಶಗಳು ಮಾರ್ಕ್ಸ್‌ನಿಗೆ ಮನುಷ್ಯ ಕೆಲಸ ಮಾಡುವ ಮೂಲಕ ಕಲಾವಿದನ ಸ್ಥಿತಿಯನ್ನು ತಲುಪುವಂತೆ ಮಾಡುವುದೆ ಆಗಿದೆ. ಏಕೆಂದರೆ ಮಾರ್ಕ್ಸ್‌ನ ದೃಷ್ಟಿಯಲ್ಲಿ ಪ್ರತಿಯೊಬ್ಬ ಶ್ರಮಿಕನೂ ಒಬ್ಬ ಉತ್ಪಾದಿಸುವ ಕಲಾವಿದನು ಹೌದು.

ಈ ಸಂದರ್ಭದಲ್ಲಿ ಮಾರ್ಕ್ಸ್ *Dialectics* ಉಪಯೋಗದ ಬಗ್ಗೆ ಮತ್ತು ಮನುಷ್ಯನಿಗೆ ಈ ಅನಾಥೀಕರಣದಿಂದ ವಿಮುಕ್ತಿ ದೊರಕುವ ಸಾಧ್ಯತೆಗಳ ಬಗ್ಗೆ ಬರೆದಿರುವ ಮಾತುಗಳು ಕುತೂಹಲಕಾರಿಯಾಗಿವೆ. *Dialectics* ಮುಖ್ಯವಾಗಿ ಕೆಲಸ ಮಾಡುವ ಅವಕಾಶಗಳನ್ನು ಮಾನವೀಕರಣ ಗೊಳಿಸುವಂತೆ ಚರಿತ್ರೆಯನ್ನು

ವಿಮರ್ಶಿಸಲು ಒಂದು ಸಾಧನ ಎನ್ನುತ್ತಾನೆ. ಈ ರೀತಿಯ ಮಾನವೀಕರಣ ಯಾವತ್ತೂ ಮುಗಿಯುವಂತಹದಲ್ಲ, ಆದ್ದರಿಂದ ಮನುಷ್ಯ ಇದರ ಬಗ್ಗೆ ಎಚ್ಚರದಿಂದಿರಬೇಕು. ಅದು ಯಾವಾಗಲೂ ಆಗುವಂತಹದು ಮತ್ತು ಯಾವಾಗಲೂ ಆಗುತ್ತ ಪೂರ್ಣವಾಗದೆ ಇರುವಂತಹದು ಕೂಡ. ಇಲ್ಲಿಯ ಕೆಲವು ಪ್ರಬಂಧಕಾರರು ರಷ್ಯಾ ಚೀನಾದ ಆರ್ಥಿಕ ರಾಜಕೀಯ ಮಾದರಿಗಳು ಈ ದೃಷ್ಟಿಯಿಂದ ನೋಡಿದಾಗ ಸಮಾಜವಾದಿ ಮಾರ್ಗದಿಂದ ಬಹಳ ದೂರವಾಗಿದೆ ಎಂದು ಹೇಳುತ್ತಾರೆ. ನಾರ್ಮನ್ ಥಾಮಸ್ ಎಂಬ ಪ್ರಬಂಧಕಾರ ಹೇಳಿರುವ ಹಾಗೆ ಸಮಾಜವಾದವೆಂದರೆ ಹೆಚ್ಚಿನ ಉತ್ಪಾದನೆ, ಉತ್ಪಾದನಾಂಗಗಳ ಸರ್ಕಾರಿ ಒಡೆತನ ಎನ್ನುವುದಾದರೆ ಸಮಾಜವಾದ ಖಂಡಿತ ಬಂದಿದೆ. ಆದರೆ ಅದು ಮನುಷ್ಯ ಸಂಬಂಧಗಳಲ್ಲಿ, ಸ್ವಭಾವಗಳಲ್ಲಿ ಆಗಬಲ್ಲ ಗುಣಾತ್ಮಕ ಬದಲಾವಣೆ ಎನ್ನುವುದಾದರೆ ಅದು ಇನ್ನು ಬಹಳ ದೂರದಲ್ಲಿದೆ. ಇದರ ಬಗ್ಗೆ ಮಾರ್ಕ್ಸ್ ಸ್ಪಷ್ಟವಾಗಿದ್ದಾನೆ. ಸಮಾಜವಾದದ ಹೆಸರಲ್ಲಿ ಅತಿ ಶ್ರೀಮಂತಿಕೆಯನ್ನಾಗಲೀ, ಅತಿ ಬಡತನವನ್ನಾಗಲೀ, ಅತಿ ಸರಳತೆಯನ್ನಾಗಲೀ ಆಶಯವಾಗಿಟ್ಟು ಕೊಳ್ಳುವುದನ್ನು ಮಾರ್ಕ್ಸ್ ವಿರೋಧಿಸುತ್ತಾನೆ. ಸಮಾಜವಾದದ ಮುಖ್ಯ ಗುರಿ ಉತ್ಪಾದನೆ ಕ್ರಿಯೆಯ ಮಾನವೀಕರಣ ಮಾತ್ರ. ಇದು ಆಗದೆ ಉತ್ಪಾದನೆ ಹೆಚ್ಚುವುದು, ಕಡಮೆಯಾಗುವುದು ಸಮಾಜವಾದವನ್ನು ತರಲಾರದು. ಬರೇ ಉತ್ಪಾದನೆಯನ್ನು ಕುರಿತು ತಲೆ ಕೆಡಿಸಿ ಕೊಳ್ಳುವುದು ಬಂಡವಾಳ ಶಾಹಿ ಆರ್ಥಿಕ ವ್ಯವಸ್ಥೆಯ ಮುಖ್ಯ ಚಿಂತೆ. ಉತ್ಪಾದನೆಯಾಗುವ ಮತ್ತು ಉತ್ಪಾಧನೆಯಾಗಬೇಕಾದ ರೀತಿಯನ್ನು ಕುರಿತು ಸಮಾಜವಾದ ಚಿಂತನೆ ಮಾಡ ಬೇಕು. ಚೀನಾ, ರಷ್ಯಾದ ಮಾದರಿಗಳು ಉತ್ಪಾದನೆಯ ಹೆಚ್ಚಳಕ್ಕೆ ಗಮನ ಕೊಡುವಷ್ಟು ಉತ್ಪಾದನಾ ವಿಧಾನಕ್ಕೆ, ಶ್ರಮದ ಪ್ರಕ್ರಿಯೆಯನ್ನು ಮಾನವೀ ಕರಣ ಗೊಳಿಸುವುದಕ್ಕೆ ಹೆಚ್ಚು ಗಮನ ಕೊಡುತ್ತಿಲ್ಲವೆಂದು ಡೆನಿಲೊಡೊಲ್ಸಿ, ಬಿ. ಬಿ. ಬಟ್ಮೊಮೊರ್ ಮುಂತಾದ ಪ್ರಬಂಧಕರು ವಾದಿಸುತ್ತಾರೆ.

ಮನುಷ್ಯನ ಬಗ್ಗೆ ಮಾರ್ಕ್ಸ್‌ಗಿರುವ ಶ್ರದ್ಧೆ, ಆಸಕ್ತಿಗಳು ಇಷ್ಟಕ್ಕೆ ಮುಗಿಯುವುದಿಲ್ಲ. ತನ್ನ ಆದರ್ಶ ಮನುಷ್ಯನ ಕಲ್ಪನೆಯನ್ನು ಕುರಿತು ಮಾರ್ಕ್ಸ್ ಬರೆಯುತ್ತಾ ಪ್ರತಿಯೊಬ್ಬ ವ್ಯಕ್ತಿಯೂ ಪೂರ್ಣ ಮನುಷ್ಯನಾಗಬೇಕು ಖಾಸಗಿ ಮನುಷ್ಯನಾಗಬೇಕು ಮತ್ತು ಸ್ವಯಂಚಾಲಿತ ಮನುಷ್ಯನಾಗಬೇಕೆಂದು ಹೇಳುತ್ತಾನೆ. ಆಧುನಿಕ ಮನುಷ್ಯನ ವ್ಯಕ್ತಿತ್ವದಂತೆ ಛಿದ್ರ ಗೊಂಡ ವ್ಯಕ್ತಿತ್ವವಾಗಲಿ, ಊನ ಗೊಂಡ ವ್ಯಕ್ತಿತ್ವವಾಗಲೀ ಯಾಂತ್ರಿಕವಾದ ವ್ಯಕ್ತಿತ್ವವಾಗಲೀ-ಇವೆಲ್ಲವನ್ನು ಮಾರ್ಕ್ಸ್ ವಿರೋಧಿಸುತ್ತಾನೆ. ಈ ಮನುಷ್ಯ ಇರುವುದಿಲ್ಲ. ಪೂರ್ಣ ಮನುಷ್ಯನೆಂದರೆ ವ್ಯಕ್ತಿತ್ವದ ಭೌತಿಕ ಮತ್ತು ಬೌದ್ಧಿಕ ಆಯಾಮಗಳ ವಿಂಗಡಣೆಯಿರುವುದಿಲ್ಲ ಮತ್ತು ಅವನಿಗೆ ಶ್ರಮ ಮತ್ತು ಖುಷಿಯ ನಡುವೆ ವ್ಯತ್ಯಾಸವಿರುವುದಿಲ್ಲ; ಅದೇ ರೀತಿ ಅವನು ಯಾವುದೇ ಒಂದು ಕೆಲಸಕ್ಕೆ ಕಟ್ಟು ಬೀಳ ಬೇಕಿಲ್ಲ. ಸುಪ್ರಸಿದ್ಧವಾದ ಮಾರ್ಕ್ಸ್‌ನ ಹೇಳಿಕೆಯ ಪ್ರಕಾರ ಆತನ ಆದರ್ಶ

ಸಮಾಜದಲ್ಲಿ ಕಲಾವಿದರಿರುವುದಿಲ್ಲ, ಕಲೆಯನ್ನು ಬಲ್ಲ ಜನರಿರುತ್ತಾರೆ. ಪೂರ್ಣವಾದ ಮನುಷ್ಯನಿಗೆ ಶ್ರಮದ ಮೂಲಕ ಆತನ ವ್ಯಕ್ತಿತ್ವವನ್ನು, ಕಂಡು ಕೊಳ್ಳಲು ಸಾಧ್ಯವಾಗ ಬೇಕು.

ಖಾಸಗಿ ಮನುಷ್ಯನೆಂದರೆ ಮಾರ್ಕ್ಸ್‌ನ ಪ್ರಕಾರ ಅವನು ಅವನೆ ಆಗಿರುವುದು. ಆ ರೀತಿಯ ಮನುಷ್ಯನಿಗೆ ತನ್ನದೇ ಆದ ವಿಶಿಷ್ಟ ಸ್ವಭಾವಗಳಿರುತ್ತವೆ ಮತ್ತು ಆತ ತನ್ನ ವ್ಯಕ್ತಿತ್ವ ಮತ್ತು ಚಾರಿತ್ರ್ಯವನ್ನು ತಾನೆ ರೂಢಿಸಿಕೊಳ್ಳುತ್ತಿರುತ್ತಾನೆ ಮತ್ತು ಇದೆಲ್ಲಕ್ಕಿಂತ ಮುಖ್ಯವಾಗಿ ಅವನು ಈಗಿರುವ ಸ್ಥಿತಿಗೂ, ಅವನು 'ಆಗ ಬೇಕಾದ' ಸ್ಥಿತಿಗೂ ಅಂತಹ ವ್ಯತ್ಯಾಸಗಳಿರುವುದಿಲ್ಲ. ಅವನು 'ಅವನೇ' ಆಗಿರುತ್ತಾನೆ. ಆತನಿಗೆ ತನ್ನ ಖಾಸಗಿ ಬದುಕಿನ ಆಶಯಗಳಿಗೂ ಸಮಾಜದ ಆಶಯಗಳಿಗೂ ಇರುವ ಸಂಬಂಧದ ಅರಿವಿರುತ್ತದೆ. ಮತ್ತು ಅವೆರಡೂ ಒಂದೇ ಆಗಿರುತ್ತದೆ.

ಈ ರೀತಿಯ ಖಾಸಗಿ ಮನುಷ್ಯ ಸಕ್ರಿಯ ವ್ಯಕ್ತಿಯಾಗಿರುತ್ತಾನೆ. ಏಕೆಂದರೆ ಅವನ ಕ್ರಿಯೆಗಳಿಗೂ ಅವನ ಆಶಯಗಳಿಗೂ ನೇರವಾದ ಮತ್ತು ಪ್ರೀತಿಯ ಸಂಬಂಧ ವಿರುತ್ತದೆ. ಸೃಜನಶೀಲ ಶ್ರಮ ಅಂತಹ ಕ್ರಿಯೆಗಳಲ್ಲಿ ಒಂದು. ಕಲೆಗೆ ಬೇರೆ ಏನು ಗುರಿ ಇರುವುದಿಲ್ಲ. ಕಲೆಗೆ ಕಲೆಯೇ ಗುರಿ. ಅದು ಕಲಾವಿದನನ್ನು ಔನ್ನತ್ಯಕ್ಕೆರಿಸುತ್ತದೆ. ಆತನನ್ನು ಪರಿಪೂರ್ಣ ಗೊಳಿಸುತ್ತದೆ ಮತ್ತು ಖುಷಿ ನೀಡುತ್ತದೆ, ಶ್ರಮ ಕೂಡ ಕಲೆ ಯಂತಾಗ ಬೇಕು. ಶ್ರಮಿಕ ಕೂಡ ಕಲಾವಿದನಂತಾಗಬೇಕು. ಈ ರೀತಿಯ ಖಾಸಗಿ ಮನುಷ್ಯ ಸ್ವಯಂ ಚಾಲಿತ ಮನುಷ್ಯನೂ ಹೌದು.

ಈ ಮನುಷ್ಯ ಹೀಗೆ ; ಅವನು ಬದಲಾಯಿಸುವುದೆ ಇಲ್ಲ ಎಂಬ ವಿಚಾರ ಮಾರ್ಕ್ಸ್‌ನ ದೃಷ್ಟಿಯಲ್ಲಿ ಬಾಲಿಶವಾದದ್ದು. ಚರಿತ್ರೆಯ ಬದಲಾವಣೆ ಸಾಧ್ಯವಾಗು ವುದೆ ಮನುಷ್ಯ ಸ್ವಭಾವದ ಬದಲಾವಣೆಯಿಂದ, ಪ್ರಕೃತಿಯ ಮೇಲೆ ಪ್ರಭುತ್ವ ತಂದು ಕೊಳ್ಳುತ್ತಾ ಜಗತ್ತನ್ನು ಬದಲಾಯಿಸುತ್ತಾ ಹೋಗುವ ಮನುಷ್ಯ ಆ ರೀತಿ ಬದಲಾಯಿಸುವ ಪ್ರಕ್ರಿಯೆಯಲ್ಲಿ ತನ್ನ ಗುಣವನ್ನು ಕೂಡ ಬದಲಾಯಿಸಿಕೊಳ್ಳುತ್ತಾನೆ. ಈ ದೃಷ್ಟಿಯಿಂದ ಮನುಷ್ಯರನ್ನು ಹೀಗೇ ಎಂದು ಹೇಳುವುದು ತಪ್ಪು. ಸಂದರ್ಭದ ಚೌಕಟ್ಟಿನಲ್ಲಿ ಮಾತ್ರ ಮನುಷ್ಯನನ್ನು ನೋಡಬೇಕು.

ಪ್ರೀತಿ ಮತ್ತು ವಸ್ತುನಿಷ್ಠತೆಗೆ ನೇರವಾದ ಸಂಬಂಧವಿದೆ. ನೀನು ಪ್ರೀತಿಸುವುದ ರಿಂದ ಮಾತ್ರ ವಸ್ತುನಿಷ್ಠನಾಗಬಲ್ಲೆ. ನೀನು ಒಬ್ಬ ವ್ಯಕ್ತಿಯನ್ನು ಪ್ರಾಮಾಣಿಕವಾಗಿ ಪ್ರೀತಿಸಿದರೆ ನಿನ್ನ ಪ್ರೀತಿ ನೀನು ಆ ವ್ಯಕ್ತಿಗೆ ಬಯಸಿದ್ದನ್ನು ದಕ್ಕಿಸಿ ಕೊಡಲು ಅಸಮರ್ಥ ನಾದರೆ ಆ ಅಸಾಮರ್ಥ್ಯದ ಕಾರಣಗಳನ್ನು ಹುಡುಕುತ್ತಾ ನೀನು ವಸ್ತು ನಿಷ್ಠವಾಗು ತ್ತೀಯೆ. ಆದ್ದರಿಂದ ಪ್ರೀತಿಸುವುದರ ಮೂಲಕ ಮಾತ್ರವೇ ನೀನು ವಸ್ತು ನಿಷ್ಠನಾಗು ವುದು.

ಬಂಡವಾಳ ಶಾಹಿ ವ್ಯವಸ್ಥೆಯಲ್ಲಿ ಇರುವ ಮನುಷ್ಯ ಸಂಬಂಧಗಳ ಸ್ವರೂಪದ ಬಗ್ಗೆ ಕೂಡ ಮಾರ್ಕ್ಸ್ ಪ್ರಸ್ತಾಪಿಸುತ್ತಾನೆ. ಈ ವ್ಯವಸ್ಥೆಯಲ್ಲಿ ಮನುಷ್ಯ ಭಾಷೆ ಯೆಂಬುದೆ ಇರುವುದಿಲ್ಲ, ಇರುವುದು ವಸ್ತುವಿನ ಭಾಷೆ ಮಾತ್ರ. ಇಲ್ಲಿ ನಡೆಯುವ ಚರ್ಚೆಯಲ್ಲಿ ಮನಷ್ಯನ ಬಗ್ಗೆ ಹೆಚ್ಚು ಪ್ರಸ್ತಾಪವಿರುವುದಿಲ್ಲ. ಹಣ, ಯಂತ್ರ ಮತ್ತು ವಸ್ತುಗಳನ್ನು ಕುರಿತ ಚರ್ಚೆ ನಡೆಯುವುದು, ಮನುಷ್ಯ ಮನುಷ್ಯರ ನಡುವೆ ಪ್ರಾಮಾಣಿಕವಾದ ಸಂಬಂಧಗಳು ಏರ್ಪಡದೇ ಇರಲು ವಸ್ತುಗಳೇ ಕಾರಣ. ಮನುಷ್ಯ ಭಾಷೆ ಅಸ್ತಿತ್ವದಲ್ಲಿಲ್ಲದೆ ವಸ್ತುಗಳ ಭಾಷೆ ಇರುವಾಗ ಒಬ್ಬರನ್ನೊಬ್ಬರು ಅರ್ಥ ಮಾಡಿ ಕೊಳ್ಳುವುದು ಹೇಗೆ ಎಂದು ಮಾರ್ಕ್ಸ್ ಪ್ರಶ್ನಿಸುತ್ತಾನೆ. ಪ್ರೀತಿ, ಗೆಳೆತನ ಜ್ಞಾನ, ಗುಣ, ಆತ್ಮಸಾಕ್ಷಿ ಎಲ್ಲವೂ ವಾಣಿಜ್ಯೀಕರಣಗೊಂಡಿರುತ್ತವೆ. ಮನುಷ್ಯ ಸಂಬಂಧ ಗಳು ಗುಣ ಸ್ವಭಾವಗಳ ಸಾಮರಸ್ಯದ ಮೇಲೆ ಅವಲಂಬಿತವಾಗುವಂತೆ ಪ್ರತಿಯೊಬ್ಬರು ಶ್ರಮಿಸಬೇಕು, ಪ್ರತಿಯೊಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ವಸ್ತುವಿನಂತೆ ನೋಡದೆ *(Not as object)* ಮನುಷ್ಯನಂತೆ ನೋಡಬೇಕೆಂದು ಒತ್ತಾಯಿಸುವ ಮಾರ್ಕ್ಸ್ ಬಂಡವಾಳ ಶಾಹಿ ವ್ಯವಸ್ಥೆಯ ಮನಷ್ಯ ಸಂಬಂಧದಲ್ಲಿ, ಅಸೂಯೆ, ಈರ್ಷೆ, ದ್ವೇಷಗಳು ಹೆಚ್ಚಾಗಿರುತ್ತವೆ. ಪ್ರೀತಿ, ವಿಶ್ವಾಸದ ಅಂಶಗಳು ಕಡಮೆಯಿರುತ್ತವೆ ಎಂದು ಹೇಳುತ್ತಾನೆ.

ಮಾರ್ಕ್ಸ್ ಈ ಚಿಂತನೆಗಳನ್ನು ತಿರಸ್ಕರಿಸಿರುವ ಕೆಲವು ಮಾರ್ಕ್ಸ್‌ವಾದಿಗಳಿದ್ದಾರೆ. ಅವರ ಪ್ರಕಾರ ಮಾರ್ಕ್ಸ್ ಇದೆಲ್ಲ ತನ್ನ ಯೌವ್ವನದ ಭಾವುಕ ದಿನಗಳಲ್ಲಿ ಬರೆದುದು. ಆದರೆ ಇಲ್ಲಿಯ ಒಬ್ಬ ಲೇಖಕ ಹೇಳುವ ಹಾಗೆ ಮನುಷ್ಯನ ಬಗ್ಗೆ ಶ್ರದ್ಧೆಯಿಲ್ಲದೆ, ಆತನ ಸ್ಥಿತಿಗತಿಗಳ ಬಗ್ಗೆ ಕಳಕಳಿ ಇಲ್ಲದ ಯಾವ ಲೇಖಕನು *Capital* ನಂತಹ ಬೃಹತ್ ಗ್ರಂಥವನ್ನು ಬರೆಯುವುದು ಸಾಧ್ಯವಿಲ್ಲ. ಆತನ ಮಾನವತಾವಾದಿ ಚಿಂತನೆಗಳು *Capital* ಮತ್ತು *Manifesto* ನಲ್ಲಿವೆ ಎಂಬುದನ್ನು ಉದಾಹರಣೆ ಗಳೊಡನೆ ಅನೇಕ ಲೇಖಕರು ತೋರಿಸಿದ್ದಾರೆ.

ಈ ಪುಸ್ತಕ ಅಂತರರಾಷ್ಟ್ರೀಯ ಸೆಮಿನಾರೊಂದರಲ್ಲಿ ಮಂಡಿಸಿದ ಪ್ರಬಂಧಗಳ ಸಂಗ್ರಹ. ಇಲ್ಲಿಯ ಲೇಖಕರಲ್ಲಿ ಒಂದು ವಿಶೇಷತೆಯಿದೆ. ಅರ್ಧಕ್ಕು ಹೆಚ್ಚಿನ ಜನ ಪೂರ್ವ ಯೂರೋಪು ದೇಶಗಳಿಗೆ ಸೇರಿದವರು. ಹಂಗೇರಿ, ಜೆಕ್, ಪೋಲೆಂಡ್, ರುಮೇನಿಯಾ ದೇಶಗಳಿಗೆ ಸೇರಿದ ಈ ಲೇಖಕರು ಸಮಾಜವಾದಿ ಆಂದೋಳನ ಮಾನವತಾವಾದವನ್ನು ಏಕೆ ಒಳಗೊಳ್ಳಬೇಕು ಎಂದು ತಮಗೆ ತಾವೇ ಪ್ರಶ್ನೆ ಕೇಳಿ ಕೊಳ್ಳುತ್ತಾರೆ. ಕಲ್ಲಿದ್ದಲು ಮತ್ತು ಉಕ್ಕಿನ ಸಮಸ್ಯೆಯು ಮನುಷ್ಯರ ಸಮಸ್ಯೆಗಳಿಗಿಂತ ಮುಖ್ಯವಾಗಿ ರಷ್ಯಾದ ತಮ್ಮ ದೇಶಗಳ ಕ್ರಾಂತಿಯ ಹಿನ್ನೆಲೆಯಲ್ಲಿ ಸಮಾಜವಾದ ತನ್ನ ಮಾನವೀಯತೆಯನ್ನು ಕಳೆದುಕೊಳ್ಳದೇ ಹೋಗಬೇಕಾದರೆ ಸಮಾಜವಾದಿ

ಆಂದೋಳನ ಮುಖ್ಯವಾಗಿ ಮಾನವತಾ ಕ್ರಾಂತಿಯಾಗಬೇಕೆನ್ನುತ್ತಾರೆ. ಇವರ ಈ ಮಾತು ಎರಡು ಕಾರಣಗಳಿಂದ ಮುಖ್ಯವಾದುದು. ಪಶ್ಚಿಮ ಯುರೋಪು 15ನೇ ಶತಮಾನದ ನಂತರ Renaissance ಪ್ರಭಾವಕ್ಕೆ ಒಳಗಾದ ಹಾಗೆ ಪೂರ್ವ ಯುರೋಪು ಒಳಗಾಗಲಿಲ್ಲ. ಪೂರ್ವ ಯುರೋಪಿನ ದೇಶಗಳಲ್ಲಿ ಈಗ ಮನುಷ್ಯನ ಹಕ್ಕು ಮತ್ತು ಸ್ವಾತಂತ್ರ್ಯಗಳ ಬಗ್ಗೆ ಅನೇಕ ಭೂಗತ ಚಳವಳಿಗಳು ನಡೆಯುತ್ತಿವೆ. ಈ ಸಮ್ಮೇಳನದಲ್ಲಿ ಆಫ್ರಿಕಾದ ಏಕೈಕ ಪ್ರತಿನಿಧಿಯಾದ ಲಿಯೋಪೋಲ್ಡ್ ಸೆಂಗರ್‌ನ ಪ್ರಬಂಧದಲ್ಲಿನ ಸ್ವಂತಿಕೆ, ವಿಚಾರ ಧೈರ್ಯ, ಆತ್ಮವಿಶ್ವಾಸ ಮೂರನೆಯ ಜಗತ್ತಿನ ದೇಶಗಳ ಸಾಂಸ್ಕೃತಿಕ–ಸಾಮಾಜಿಕ ಚಳವಳಿಯ ನೇತಾರರಿಗೆ ಮಾರ್ಗದರ್ಶಕವಾಗಿದೆ. ಹಿಂದುಳಿದ ದೇಶಗಳಿಗೆ ಸಮಾಜಶಾಸ್ತ್ರಜ್ಞ ಮತ್ತು ತಾತ್ವಿಕ ಮಾರ್ಕ್ಸ್ ಅರ್ಥ ಶಾಸ್ತ್ರಜ್ಞ ಮಾರ್ಕ್ಸ್‌ಗಿಂತ ಹೆಚ್ಚು ಮುಖ್ಯ ಎನ್ನುತ್ತಾನೆ ಅವನು. ಹಿಂದುಳಿದ ದೇಶಗಳು ಮುಂದುವರಿದ ದೇಶಗಳ-ಅವು ಸಮಾಜವಾದಿಯಾಗಿರಲಿ ಪ್ರಜಾತಂತ್ರವಾದಿಯಾಗಿರಲಿ ಅನುಕರಿಸಬಾರದು. ಅವುಗಳ ಅನುಭವದಿಂದ ಪಾಠ ಕಲಿಯಬೇಕು ಎಂದು ಎಚ್ಚರಿಕೆ ಕೊಡುತ್ತಾನೆ ಸೆಂಗಲ್.

ಸಮಾಜವಾದಿ ಆಂದೋಳನ ತನ್ನ ಮಾನವೀಯ ಆಯಾಮಗಳನ್ನು ಕಳೆದುಕೊಳ್ಳದಂತೆ ಮಾಡಲು ಸಾಧ್ಯವಿರಬಹುದಾದ ಒಂದೇ ಒಂದು ಮಾರ್ಗವೆಂದರೆ ಮನುಷ್ಯನ ಪ್ರಜ್ಞಾವಂತಿಕೆಯೊಂದೇ ಎನ್ನುತ್ತಾನೆ ಇವಾನ್ ಸ್ವಿಟಾಕ್. ಮನುಷ್ಯನ ಪ್ರಜ್ಞಾವಂತಿಕೆ ಒಂದೇ ಸಮನೆ ವಿಸ್ತಾರವಾಗುತ್ತಿರುವ ಇಪ್ಪತ್ತನೆ ಶತಮಾನದಲ್ಲಿ ಮಾತ್ರ ಇದು ಸಾಧ್ಯ ಎಂದು ಹೇಳುವ ಈತ, ಸಮಾಜವಾದಿ ಆಂದೋಳನ ಉತ್ಪಾದನೆ ಮತ್ತು ತಾಂತ್ರಿಕ ಪ್ರಗತಿಗೆ ಮಾತ್ರ ಸೀಮಿತವಾಗದ ಆಂದೋಳನವಾಗದ ಹಾಗೆ ಉಳಿಸುವುದು ಮನುಷ್ಯನ ಎಚ್ಚರ ಮತ್ತು ಪಜ್ಞಾಪೂರ್ವಕ ಪ್ರಯತ್ನದಿಂದ ಮಾತ್ರ ಎನ್ನುವ ಈತನ ಹೇಳಿಕೆ ಇಡೀ ಪುಸ್ತಕದ ಧ್ವನಿಯಾಗಿದೆ.

**ಟಿಪ್ಪಣಿಗಳು :**

1. ಸುಮಾರು ಐದುನೂರು ಪುಟಗಳ ಈ ಗ್ರಂಥವನ್ನು ಪರಿಚಯಿಸುವುದು ಈ ಲೇಖನದ ವ್ಯಾಪ್ತಿಗೆ ಮೀರಿದ್ದು. ಮನಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ ಹೀಗೆ ವಿವಿಧ ಹಿನ್ನೆಲೆಗಳಿಂದ ಬಂದವರು ಇಲ್ಲಿಯ ಲೇಖಕರಾಗಿದ್ದಾರೆ. ಈ ರೀತಿಯ ವಿವಿಧ ಹಿನ್ನೆಲೆಗಳ ಪರಿಚಯವಿದ್ದವರು ಪುಸ್ತಕವನ್ನು ಪೂರ್ಣ ಪ್ರಮಾಣದಲ್ಲಿ ಪರಿಚಯ ಮಾಡಿಕೊಡಬಹುದಾಗಿದೆ.

2, ಪುಸ್ತಕವನ್ನು ಐದು ವಿಭಾಗಗಳಾಗಿ ವಿಂಗಡಿಸಲಾಗಿದೆ.

1. *On Humanism*
2. *On Man*
3. *On Freedom*
4. *On Alienation*
5. *On Practice*

# ಕೋಟೆಯೊಳಗಿನ ಹೆಂಗಸರು

ಸಿ. ಎಸ್. ಲಕ್ಷ್ಮಿ

ತಿರುನೆಲವೆಲಿಯಲ್ಲಿನ ಶ್ರೀ ವೈಕುಂಠಂ ಗ್ರಾಮದಲ್ಲಿ ಅನೇಕ ವರ್ಷಗಳಿಂದಲೂ ಇರುವ ಈ ಕೋಟೆ ಜನರಿಗೆ ಹಳೆಯದು. ಇಪ್ಪತ್ತು ಎಕರೆ ವಿಸ್ತೀರ್ಣದ ಈ ಕೋಟೆಗೆ 12 ಅಡಿ ಎತ್ತರದ ಗೋಡೆಗಳು. ಗೋಪುರದಂತೆ ಅವುಗಳ ನಿರ್ಮಾಣ-ತಳ ಅಗಲ, ಮೇಲ್ಭಾಗ ಕಿರಿದು. ಕೋಟೆಗೆ ನಾಲ್ಕು ಬಾಗಿಲುಗಳು. ಎರಡು, ಸಾಮಾನ್ಯ ದಿನಗಳಲ್ಲಿ ತೆರೆಯಲ್ಪಟ್ಟರೆ ಮಿಕ್ಕೆರಡು ತೆರೆದುಕೊಳ್ಳುವುದು ಕೋಟೆಯಲ್ಲಿ ಸತ್ತ ಜನರ ಶವವನ್ನು ಹೊರತರಬೇಕಾದ ಸಂದರ್ಭದಲ್ಲಿ ಮಾತ್ರ. ಮುಖ್ಯದ್ವಾರ ಮಾತ್ರ ದೇವಸ್ಥಾನದ ಬಾಗಿಲಿನಂತೆ ಭಾರಿ ಅಳತೆಯದು. ಕೋಟೆಯ ಹೊರಗಿನ ದಾರಿಹೋಕರಿಗೆ ಇಲ್ಲಿನ ಜನರ ಚಲನವಲನ ತಿಳಿಯದಂತೆ ಬಾಗಿಲಿಗೆ ಅಡ್ಡಲಾಗಿ ಒಳಭಾಗದಲ್ಲಿ ಇಟ್ಟಿಗೆ ಗೋಡೆ. ಕೋಟೆಯ ಹೆಂಗಸರಿಗೆ ಹೊರಜಗತ್ತೆಂದರೆ ಏನೆಂದೇ ತಿಳಿಯದು. ಅವಳನ್ನು ಹೊರಗೆ ಕರೆತರುವುದು ಅವಳು ಸತ್ತಾಗ ಮಾತ್ರ.

ಕೋಟೆಯ ನಿವಾಸಿಗಳು ಈ ವಿಪರ್ಯಾಸಕ್ಕೆ ವಿವರಣೆ ಕೊಡುತ್ತಾರೆ. ತಮ್ಮ ಮಹಿಳೆಯರ ಚಾರಿತ್ರ್ಯ ಮತ್ತು ಗೌರವವನ್ನು ಕಾಪಾಡುವುದಕ್ಕೋಸ್ಕರ ಇಂತಹ ವ್ಯವಸ್ಥೆ ಅಗತ್ಯವೆಂದು ಇವರೆನ್ನುತ್ತಾರೆ. ತಾವು ಕಾಶ್ಮೀರದಿಂದ ಬಂದವರೆಂದೂ ಅಲ್ಲಿ ದೊರೆಗಳ ಆಸ್ಥಾನದಲ್ಲಿ ಸಾಮಂತರು, ಖಜಾಂಚಿಗಳಾಗಿದ್ದ ತಾವು ರಾಜರ ಕಿರೀಟ ಧಾರಣಕ್ಕೆ ಜವಾಬ್ದಾರರಾಗಿದ್ದೇವೆಂದೂ ಇವರು ಹೇಳಿಕೊಳ್ಳುತ್ತಾರೆ. ಪಾಂಡ್ಯ ರಾಜನ ಆಹ್ವಾನದ ಮೇಲೆ ಇವರು ಆಸ್ಥಾನಿಕರಾಗಿದ್ದರಂತೆ. ಈ ವಂಶದ ದೊರೆ ತನ್ನವರಾಯ ಎಂಬುವನ ಕಾಲದಲ್ಲಿ ಉತ್ತರಾಧಿಕಾರಿಗೆ ಸಂಬಂಧಿಸಿದಂತೆ ಆಸ್ಥಾನಿಕರು ಮತ್ತು

> ತಮಿಳು ನಾಡಿನ ಶ್ರೀ ವೈಕುಂಠಂ ಗ್ರಾಮದ ಗರ್ಭದಲ್ಲೊಂದು ಮಣ್ಣಿನ ಕೋಟೆ. ಗಂಡಸಿನ ಅಮಾನವಿಯ ಭದ್ರ ಮುಷ್ಟಿಯಲ್ಲಿ, ಆಚಾರ ವಿಚಾರಗಳ ಮೌಢ್ಯದ ಸುಳಿಯಲ್ಲಿ ಸಿಕ್ಕ ಇಲ್ಲಿನ ಹೆಂಗಸರು ದೈಹಿಕವಾಗಿ, ಮಾನಸಿಕವಾಗಿ ನಿಷ್ಕ್ರಿಯರಾಗಿದ್ದಾರೆ ; ಇದ್ದೂ ಸತ್ತಂತಿದ್ದಾರೆ. ಸಿ. ಎಸ್. ಲಕ್ಷ್ಮಿ ಮುಂಬಯಿಯ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗಾಗಿ (ಡಿಸೆಂಬರ 16, 1979) ಮಾಡಿರುವ ಸಂದರ್ಶನದ ಅನುವಾದವನ್ನು ಬಿ. ಎಸ್. ವೆಂಕಟಲಕ್ಷ್ಮಿಯವರು ಮಾಡಿಕೊಟ್ಟಿದ್ದಾರೆ.

ದೊರೆಯ ಮಧ್ಯೆ ಎದ್ದ ಮನಸ್ತಾಪದಿಂದಾಗಿ ಪ್ರಾಣಹಾನಿಯ ಭೀತಿಗೆ ಇವರು ಒಳಗಾದ್ದೇ ಅಲ್ಲದೆ ಇವರ ಹೆಂಗಸರ ಮರ್ಯಾದೆಗೆ ಸಂಚಕಾರ ಉಂಟಾಗುವ ಸಂದರ್ಭ ವುಂಟಾಯಿತಂತೆ. ಹೆಂಗಸರು ಚಿತೆಗೆ ಧುಮುಕಲು ಸಿದ್ಧರಾದರು. ಪರಾಕ್ರಮ ಎಂಬ ದೊರೆ ಅವರ ಬಗ್ಗೆ ಮರುಕ ತಾಳಿದನಂತೆ. ಮುನ್ನೂರು ಮನೆಗಳನ್ನು ಒಳಗೊಂಡ ಈ 20 ಎಕರೆ ಭೂಮಿಯನ್ನು ಅವರಿಗೆ ಬಳುವಳಿಯಾಗಿತ್ತನಂತೆ_ಸುಮಾರು ಒಂದು ಸಾವಿರ ವರ್ಷದ ಹಿಂದೆ.

ಅಂದಿನಿಂದ ಕೋಟೆಯೊಳಗೆ ಹುಟ್ಟಿದ ಎಲ್ಲ ಹೆಂಗಸರೂ ಕೋಟೆಯಲ್ಲೇ ಭದ್ರ. ಈಶಾನ್ಯದಿಕ್ಕಿಗೆ ಬಾಗಿಲು ತೆರೆದುಕೊಂಡಾಗ ಕೋಟೆಯಲ್ಲಿ ಯಾವಳೋ ಹೆಂಗಸು ಸತ್ತಿದ್ದಾಳೆಂದು ಹೊರಗಿನವರಿಗೆ ಅರ್ಥವಾಗುತ್ತದೆ. ಆದರೆ ಸತ್ತಾಗಲೂ ಜನ ಅವಳನ್ನು ಗುರುತಿಸಲಾರರು. ಸತ್ತ ಹೆಂಗಸಿನ ಶವದ ಮೇಲೆ ದಿಂಬಿನ ಚೀಲಗಳಂತೆ ಹೊಲೆದ ಏಳು ಪದರದ ಬಟ್ಟೆಯನ್ನು ಪೇರಿಸಲಾಗುತ್ತದೆ. ಮೇಲಿನ ಹೊದಿಕೆ ಬಿಳಿ ಬಣ್ಣದ್ದಾಗಿದ್ದರೆ ಸತ್ತವಳು ವಿಧವೆ ; ಅದು ಬಣ್ಣದಾಗಿದ್ದರೆ ಶವ, ಮುತ್ತೈದೆ.

ಕೋಟೆಯನ್ನು ಕುರಿತಂತೆ ದಂತಕಥೆಯೊಂದುಂಟು. ಇಲ್ಲಿನ ಹುಡುಗಿಯೊಬ್ಬಳಿಗೆ ಕೋಟೆಯ ಹೊರಗಿನ ರಸ್ತೆಯಲ್ಲಿ ಸಾಗುತ್ತಿದ್ದ ದೇವರ ಮೆರವಣಿಗೆಯನ್ನು ನೋಡುವ ಆಸೆಯಾಗಿ ಗೋಡೆಯ ಮೇಲೆ ಹತ್ತಿ ಹೊರ ಇಣುಕಿದಳಂತೆ. ಆಕೆಯನ್ನು ಹಿಡಿದು ಕೊಂದು ಮಿಕ್ಕ ಹೆಂಗಸರನ್ನು ಎಚ್ಚರಿಸುವಂತೆ ಅವಳನ್ನು ಅಲ್ಲೇ ಭೂಗತ ಮಾಡಲಾಯ್ತು. ಕೋಟೆಯ ಜನರೇನೋ ಇದು ಸುಳ್ಳು, ಹೀಗೆ ದಂಗೆ ಏಳುವ ಸಾಹಸವನ್ನು ಇಲ್ಲಿನ ಯಾವ ಹೆಂಗಸೂ ಮಾಡಿಲ್ಲ ಎಂದು ಕೊಚ್ಚಿಕೊಳ್ಳುತ್ತಾರೆ ! ಅವರ ಮಾತು ನಿಜವೇನೋ. ಕೋಟೆಯ ಆವರಣದಲ್ಲೆ ಸರಿಯಾಗಿ ಓಡಾಡಲು ಬಾರದ ಹೆಂಗಸು ಆ ಕಡಿದಾದ ಗೋಡೆಯನ್ನು ಹತ್ತಿರಬಹುದಾದರೂ ಹೇಗೆ ? ಗಂಡಸರು ತಮ್ಮ ವ್ಯಾಪಾರ ವ್ಯವಹಾರಕ್ಕಾಗಿ ಕೋಟೆಯನ್ನು ಬಿಟ್ಟನಂತರ ಮಾತ್ರ ಹೆಂಗಸರು ಪರಸ್ಪರ ಮಾತನಾಡಬಹುದು. ಗಂಡಸರು ತಮ್ಮ ವ್ಯವಹಾರಕ್ಕಾಗಿ ಮಧ್ಯಾಹ್ನದ ವಿಶ್ರಾಂತಿಗಾಗಿ ಹೊರಗಡೆಯಲ್ಲಿ ಮನೆಯೊಂದನ್ನು ಕಟ್ಟಿಕೊಂಡಿದ್ದಾರೆ. ಅವರು ಹಿಂತಿರುಗುವುದು ಸಂಜೆ ಕಳೆದ ನಂತರ. ಕೋಟೆಯ ಒಳಗಡೆಯಲ್ಲಿ ಮತ್ತೊಬ್ಬರ ಮನೆಗೆ ಹೋಗಲು ಸಂಕೋಚಪಡುವ ಹೆಂಗಸರು ಸಾಧಾರಣ ತಮ್ಮ ಮನೆಯವರೊಂದಿಗೆ ಮಾತ್ರ ಮಾತುಕತೆಯಾಡಿಕೊಂಡಿರುತ್ತಾರೆ. ಕೋಟೆಯೊಳಗೇ ಇರುವ ಗುಡಿಗೂ ಅವರು ಭೇಟಿ ಕೊಡರು. ಅನೇಕ ವರ್ಷಗಳ ಹಿಂದೆ ಜೀವಿಸಿದ್ದ ಅವರ ಗುರುವಿನ ಸಮಾಧಿ ಕೋಟೆಯ ಹೊರಗಡೆ ಇದ್ದು ಅದಕ್ಕೆ ಪೂಜೆ ಸಲ್ಲುತ್ತಿದ್ದರೂ ಹೆಂಗಸರು ಆ ಗುರುವನ್ನಾಗಲಿ ಸಮಾಧಿಯನ್ನಾಗಲಿ ಕಂಡಿಲ್ಲ.

ಕೋಟೆಯ ಒಳಕ್ಕೆ ಹೊರಗಿನಿಂದ ಹೆಂಗಸುಮೇಷ್ಟು ಬರುವುದುಂಟು. ಇವರ

ಸಹಾಯದಿಂದ ಇಲ್ಲಿನ ಹೆಂಗಸರು ತಮಿಳು ಮ್ಯಾಗಜಿನ್‌ಗಳನ್ನು ತಿರುವಿ ಹಾಕುವುದನ್ನು ಕಲಿತಿದ್ದಾರೆ. ಕೆಲವು ವರ್ಷಗಳ ಹಿಂದೆ ಅವರಿಗೆ ಹಾಡಲು ಬರುತ್ತಿತ್ತು. ಹುಡುಗಿ ಋತುವತಿಯಾದ ತಕ್ಷಣ ಅವಳ ಮದುವೆ. ಅದು ನಡೆಯುವುದು ಅಪರಾತ್ರಿಯಲ್ಲಿ. ಇದಕ್ಕೆ ಯಾವುದೋ ವಿಚಿತ್ರ ನಂಬಿಕೆ ಕಾರಣ. ಹುಡುಗಿಯ ಗಂಡ ಅವಳ ತಂದೆ ತಾಯಿಗಳ ಬಳಿಗೆ ವಾಸಕ್ಕಾಗಿ ಬರುತ್ತಾನೆ. ಹೆಂಡತಿಯ ತಂಗಿಯ ಮದುವೆ ನಿಷ್ಕರ್ಷೆಯಾಗುವವರೆಗೂ ಅಲ್ಲೇ ಇರುತ್ತಾನೆ. ಅನಂತರ ಅವಳ ತಂದೆ ಅವಳಿಗಾಗಿ ಬೇರೆ ಮನೆ ಕಟ್ಟುತ್ತಾನೆ. ತಂದೆಯ ಮನೆಯ ವಾರಸುದಾರಳಾಗುವವಳು ಕೊನೆಯ ಮಗಳು. ಹುಡುಗಿಯರ ಮದುವೆಯಾದ ನಂತರ ಉಳಿದುದನ್ನು ಗಂಡು ಮಕ್ಕಳು ಹಂಚಿಕೊಳ್ಳುತ್ತಾರೆ. ಕೋಟೆಯ ಬೇರೆ ಬೇರೆ ಕುಟುಂಬಗಳ ಗಂಡು ಹೆಣ್ಣುಗಳ ಮಧ್ಯೆಯಲ್ಲೆ ವಿನಿಮಯ ನಡೆಯುತ್ತದೆ. ಕೋಟೆಯ ಕುಟುಂಬಗಳಲ್ಲಿ ತನಗೆ ಸರಿಯೆನಿಸಿದ ಹುಡುಗಿ ಸಿಕ್ಕದಿದ್ದಾಗ ಗಂಡು ಬ್ರಹ್ಮಚಾರಿಯಾಗಿಯೇ ಉಳಿಯಬೇಕು. ಹುಡುಗಿಗೆ ಗಂಡು ಸಿಗದಿದ್ದಾಗ ಅವಳು ತನ್ನಕ್ಕನ ಗಂಡನನ್ನೇ ಮದುವೆಯಾಗಬೇಕು.

ಹೆಂಗಸಿಗೆ ಜಡ್ಡಾದಾಗ ಅವಳು ಆಸ್ಪತ್ರೆಗೆ ಹೋಗುವಂತಿಲ್ಲ. ಹೆಂಗಸು ಡಾಕ್ಟರನ್ನು ಕೋಟೆಯೊಳಗೆ ಕರೆತರಲಾಗುತ್ತದೆ. "ದೇವರ ದಯೆಯಿಂದ ಇಲ್ಲಿನ ಹೆಂಗಸರು ಭೀಕರ ಕಾಯಿಲೆಗೆ ಎಂದೂ ಒಳಗಾಗಿಲ್ಲ" ಎಂದವರು ಹೇಳಿಕೊಳ್ಳುತ್ತಾರೆ. ಕೋಟೆಯ ನೆನಪಿನಲ್ಲಿ ಹೆರಿಗೆ ಸಂದರ್ಭದಲ್ಲಿ ಒಬ್ಬಳು ಮಾತ್ರ ಸತ್ತಿದ್ದಾಳಂತೆ. ಅದೂ ದೇವರ ದಯೆ ಎನ್ನುತ್ತಾರೆ ಅವರು. ದೇವರಿಂದ ಮತ್ತೊಂದು ಘಟನೆಯೂ ನಡೆದಿದೆ. ಹುಡುಗಿಯೊಬ್ಬಳು ಅಪೆಂಡಿಸೈಟಿಸ್‌ನಿಂದ ನರಳುತ್ತಿದ್ದಾಗ ಗಂಡಸು ಡಾಕ್ಟರನ್ನು ಕರೆಯಬೇಕಾಯ್ತು. ಆದರೆ ದೇವರ ದಯೆ! ಡಾಕ್ಟರು ಬರುವುದರೊಳಗಾಗೇ ಅವಳ ರೋಗ ವಾಸಿಯಾಗಿತ್ತು. ಗಂಡಸಿನಿಂದ ಚಿಕಿತ್ಸೆ ಮಾಡಿಸಿಕೊಳ್ಳಬೇಕಾದ ಕರ್ಮ ಆಕೆಗೆ ತಪ್ಪಿತು! ಕೋಟೆಯೊಳಗೆ ಪ್ರವೇಶಿಸುವ ಅವಕಾಶವನ್ನು ಹೊರಗಿನ ಸೇವಕರ ಮತ್ತು ಪುರೋಹಿತರ ಕೆಲವು ಕುಟುಂಬಗಳು ಮಾತ್ರ ಪಡೆದಿವೆ. ಈ ಕುಟುಂಬಗಳ ಹೆಂಗಸರಿಂದ ಕೋಟೆಯ ಹೆಂಗಸರು ಫ್ಯಾಷನ್‌ಗಳನ್ನು ಕಲಿಯುತ್ತಾರೆ. ತಮ್ಮ ಸ್ನೇಹಿತರ ಮೂಲಕ ಹೊರಗಡೆ ತಮ್ಮ ಬಟ್ಟೆಯನ್ನು ಹೊಲಿಸಿಕೊಳ್ಳುತ್ತಾರೆ. ಇವರಲ್ಲಿ ಕೆಲವರು ಈ ಕುಟುಂಬಗಳ ಮೂಲಕ ಹಾಲು ಮಾರಿ ಸಾಲ ಪಾಲ ನೀಡುತ್ತಾರೆ. ಅವರು ಮ್ಯಾಗಜಿನ್ ಓದುತ್ತಾರೆ. ಮಾತನಾಡುತ್ತಾರೆ. ತಮ್ಮನ್ನು ಸುತ್ತುವರಿದಿರುವ ಮಣ್ಣಿನ ಗೋಡೆಗಳ ಬಗ್ಗೆ ಯಾವ ಕಾಳಜಿಯೂ ಇಲ್ಲದೆ ಕಾಲ ಹಾಕುತ್ತಾರೆ. ಇಲ್ಲಿನ ಗಂಡಸರು ವ್ಯವಸಾಯ ಮಾತ್ರ ಮಾಡಿಕೊಂಡಿದ್ದರು-ಈಗ ಅವರದು ನಾನಾ ವೃತ್ತಿ. ಆದರೆ ಇಲ್ಲಿನ ಹೆಂಗಸಿನ ಜೀವನದಲ್ಲಿ ಮಾತ್ರ ಯಾವ ಬದಲಾವಣೆಯೂ ಆಗಿಲ್ಲ.

ಮಣ್ಣಿನ ಗೋಡೆಯನ್ನು ಒಡೆದು ಹೆಂಗಸರನ್ನು ಆಕರ್ಷಿಸಿ ಅವರ ಹೊರ ಬರುವಂತೆ ಪ್ರಚೋದಿಸುವ ಪ್ರಯತ್ನ ಯಾವತ್ತೂ ನಡೆದೇ ಇದೆ. ಆದರೆ ಅದೊಂದು

ವ್ಯರ್ಥ ಶ್ರಮ. 1973ರಲ್ಲಿ ಕೋಟೆಯಲ್ಲಿ ಕೊಲೆಯೊಂದು ನಡೆದಾಗ ವ್ಯಾಜ್ಯವಾಗಿ ಕೆಲವು ಕುಟುಂಬಗಳು ಹೊರಬಂದವು. "ಆದರೆ ಆ ಸಂದರ್ಭದಲ್ಲೂ ಸಹ ಇಲ್ಲಿನ ಹೆಂಗಸರು ಸ್ವಾತಂತ್ರ್ಯವನ್ನು ಬಯಸಿ ಹೊರ ಹೋಗಲಿಲ್ಲ, ಕೊಲೆ ಅವರಲ್ಲಿ ಭಯ ಹುಟ್ಟಿಸಿತ್ತು." ಈ ಮಾತನ್ನು ಕೋಟೆ ಸಿಪಾಯಿಗಳು ಒತ್ತಿ ಹೇಳುತ್ತಾರೆ.

ಕೋಟೆಗೆ ನಾನು ಭೇಟಿಯಿತ್ತಾಗ ಶಿಥಿಲತೆಯ ಚಿಹ್ನೆಗಳು ಅಲ್ಲಾಗಲೇ ಒಡ ಮೂಡಿತು. ಖಾಲಿ ಮನೆಗಳು, ದುಸ್ಥಿತಿಯಲ್ಲಿದ್ದ ಕಟ್ಟಡಗಳು. ಮರಗಿಡಗಳು ಆರೈಕೆಯಿಲ್ಲದೆ ಸತ್ತಿದ್ದವು. ತಮ್ಮ ಜೀವನದ ಬಗ್ಗೆ ಮಾತನಾಡಲು ಹೆಂಗಸರು ಉತ್ಸುಕ ರಾಗಿದ್ದರು. ಈ ಮೊದಲು ಅವರು ಸಂದರ್ಶಕರನ್ನು ಕಂಡಿದ್ದರು. ನಮ್ಮ ಫೋಟೋ ತೆಗೆದುಕೊಳ್ಳುವುದಿಲ್ಲವೆ ಎಂದು ಅವರು ನಿರಾಶೆಯಿಂದ ಕೇಳಿದರು.

ಈ ಹೆಂಗಸರು ಬಸ್ಸು, ರೈಲನ್ನು ಕಂಡಿಲ್ಲ. ವಿದ್ಯುಚ್ಛಕ್ತಿ ಗೊತ್ತಿಲ್ಲ. ಮ್ಯಾಗಜಿನ್ ಓದಿದಾಗ ಅವರಿಗೆ ಏನನ್ನಿಸುತ್ತೆ? ಆನೆಯಂತಹ ಪ್ರಾಣಿಯ ಬಗ್ಗೆ ಅವರಲ್ಲಿ ಅಚ್ಚರಿ ಮೂಡುತ್ತದೆಯೆ? ಕಮಲದ ಹೂವನ್ನು, ನವಿಲಿನ ನರ್ತನವನ್ನು ನೋಡಲು ಅವರ ಮನಸ್ಸು ತವಕಿಸುತ್ತದೆಯೇ? ಇಲ್ಲ, ಅನ್ನುತ್ತಾರೆ ಅವರು. ಇವೆಲ್ಲವನ್ನೂ ನೋಡುವ ಅಥವಾ ತಿಳಿದುಕೊಳ್ಳುವ ಕಾತುರ ಅವರಿಗಿಲ್ಲ. ಸಿನಿಮಾದ ಬಗ್ಗೆ ಅವರ ಅನ್ನಿಸಿಕೆ ? "ನಮಗೆಲ್ಲ ಗೊತ್ತು, ನಾವು ಫಿಲಂ ಮ್ಯಾಗಜಿನ ನೋಡುತ್ತೇವೆ" ಎನ್ನುತ್ತಾರೆ. ತಮಿಳು ನಟನಟಿಯರನ್ನು ಕುರಿತು ಕಳಕಳಿಯಿಂದ ಮಾತನಾಡುತ್ತಾರೆ. ಇಂಡಿಯಾಗೆ ಯಾವತ್ತು ಸ್ವಾತಂತ್ರ್ಯ ಬಂತೆಂದು ಅವರಿಗೆ ಗೊತ್ತೇ ಇಲ್ಲ. ರಾಜಕೀಯದಲ್ಲಿ ಅವರಿಗೆ ಆಸಕ್ತಿ ಇಲ್ಲ. ಹೆಂಗಸಿಗೆ ಅದರ ಅವಶ್ಯಕತೆಯಿಲ್ಲ. ಅವರಿಗೆ ಪಾಠ ಹೇಳಿಕೊಟ್ಟ ಮೇಷ್ಟ್ರು ಅವರಿಗೆ ಅದನ್ನು ಕಲಿಸಿಲ್ಲ. ಓದಬಲ್ಲ ಕೋಟೆಯ ಗಂಡಸರನ್ನು ಕಂಡಾಗ ಅವರಿಗೆ ಹೊಟ್ಟೆಕಿಚ್ಚೇ ? ತರುಣ ವಿಧವೆಯೊಬ್ಬಳು ಕೇಳುತ್ತಾಳೆ—ಗಂಡಸು ಮಾತ್ರ ಓದ ಬೇಕಲ್ಲವೆ? ಇಲ್ಲಿನ ಗಂಡಸರಲ್ಲಿ ಕೆಲವರಿಗೆ ಹೊರಗಿನ ಹೆಂಗಸಿನ ಸಂಬಂಧವಿದೆ. ಇಲ್ಲಿನ ಯಾವೊಳಾದರೊಬ್ಬ ವಿವಾಹಿತ ಮಹಿಳೆ ಪರಪುರುಷನನ್ನು ಆಕಸ್ಮಿಕವಾಗಿ ಪ್ರೇಮಿಸಿ ಸಿದ್ದಾಳೆಯೇ ? ಅವರು ಈ ಪ್ರಶ್ನೆಯಿಂದ ಭೀತಿಗೊಳ್ಳುತ್ತಾರೆ. "ಈ ಕೋಟೆ ನೀತಿಧಾಮ", ಅವರು ನನ್ನನ್ನು ಎಚ್ಚರಿಸುತ್ತಾರೆ. ಅಂತಹ ಪ್ರಶ್ನೆಗಳನ್ನು ಇಲ್ಲಿ ಕೇಳಕೂಡದು. ಅವರು ಗಿಳಿಪಾಠದಂತೆ ಒಪ್ಪಿಸುವ ಮಂತ್ರಗಳ ಬಗ್ಗೆ ನಾನು ಕೇಳು ತ್ತೇನೆ, ಪ್ರತಿಕ್ರಿಯೆ ಅಸ್ಪಷ್ಟ. ಹಿರಿಯ ಹಂಗಸೊಬ್ಬಳು ಒಂದು ಹಳೆಯ ನೋಟ್ ಬುಕ್ ಹೊರತೆಗೆದು ಅವರ ಗುರು ತಮಿಳಿನಲ್ಲಿ ಬರೆದಿರುವ ಮಂತ್ರಗಳನ್ನು ತೋರಿಸು ತ್ತಾಳೆ. ಈ ಮಂತ್ರಗಳು ದುಷ್ಟ ಹೆಂಗಸರನ್ನು ಕುರಿತವಾಗಿದ್ದು ಗಂಡಸರು ಹೇಗೆ ಅವರಿಂದ ಕಳಚಿಕೊಂಡರು ಎಂಬುದನ್ನು ತಿಳಿಸುತ್ತದೆ. ಆದರೆ ಅವುಗಳ ಅರ್ಥದ ಬಗ್ಗೆ ಹೆಂಗಸರಿಗೆ ಆಸಕ್ತಿಯಿಲ್ಲ.

ಕೋಟೆಯಲ್ಲಿ ಇಬ್ಬರು ಹುಡುಗಿಯರು—17 ವರ್ಷ ಮತ್ತು 20 ವರ್ಷ ವಯಸ್ಸಿನವರು-ದುಃಖಿಗಳು. ಕುಟುಂಬಗಳು ಕೋಟೆಯಿಂದ ಹೊರ ಹೋದಮೇಲೆ ಅವರು ಮದುವೆಯಾಗುವಂತಹ ಹುಡುಗರೇ ಅಲ್ಲಿಲ್ಲವಂತೆ! ಮದುವೆಯ ಬಗ್ಗೆ ಅವರನ್ನು ಕೇಳಿದಾಗ ಅವರು ಅಸಂತೋಷಗೊಳ್ಳುತ್ತಾರೆ. ಅವರಲ್ಲಿ ಒಬ್ಬಾಕೆ ಹೇಳುತ್ತಾಳೆ—ಮದುವೆಯ ವಿಷಯವನ್ನೇಕೆ ಕೇಳುತ್ತೀರಿ? ಕನಸು ಕಾಣುವುದರಿಂದ ಏನು ಪ್ರಯೋಜನ? ಅವರು ತಮಿಳು ಮ್ಯಾಗಜಿನ್, ಟ್ರಾನ್ಸಿಸ್ಟರ್‌ಗಳ ಸಹವಾಸದಲ್ಲಿ ನೆಮ್ಮದಿ ಕಂಡುಕೊಳ್ಳುತ್ತಾರೆ. ಮ್ಯಾಗಜಿನ್ ಇಲ್ಲದಿದ್ದರೆ ಹುಚ್ಚು ಹಿಡಿಯುತ್ತೆ ಎನ್ನುತ್ತಾರೆ. ಅವರಿಗೆ ಮದುವೆಯಾಗಿ ಮಗಳು ಹುಟ್ಟಿದರೆ ಅವಳನ್ನು ಶಾಲೆಗೆ, ಕೋಟೆಯ ಹೊರಗಡೆ ಅವರು ಕಳಿಸುತ್ತಾರೆಯೋ? ಹೆಂಗಸರು ಕೋಟೆಯಲ್ಲೇ ಸುಖದಿಂದಿದ್ದಾರೆ ಎಂದು ಒಬ್ಬ ಹೆಂಗಸು ಒತ್ತಿ ಹೇಳುತ್ತಾಳೆ. ಹೊರಗಿನ ಹೆಂಗಸರು ನಮಗಿಂತ ಹೆಚ್ಚು ಸುಖವಾಗಿಲ್ಲ ಎನ್ನುತ್ತಾಳೆ.

ಕೋಟೆಯಿಂದ ಹೊರಬಂದ ಹೆಂಗಸರನ್ನು ಕಾಣಲು ನಾನು ಪಾಳ್ಯಂಕೋಟೆಗೆ ಹೋಗುತ್ತೇನೆ, ಅವರಲ್ಲೊಬ್ಬಳು ಹೊರಗಿನವನನ್ನು ಮದುವೆಯಾಗಿದ್ದಾಳೆ. ಅವರು ಕೋಟೆಯಿಂದ ಹೊರ ಬಂದಿದ್ದು ಸಂತೋಷವನ್ನು ಅರಸಿಕೊಂಡಲ್ಲ, ಕೊಲೆಯ ಕಾರಣಕ್ಕಾಗಿ ಎಂದು ಹೇಳಿಕೊಳ್ಳುತ್ತಾರೆ. ಹೊರಬಂದಾಗ ಅವರಿಗೇನೆನ್ನಿಸಲಿಲ್ಲ. ಧೈರ್ಯ ಕೊಡುವಂತೆ ದೇವರನ್ನು ಬೇಡಿದರಷ್ಟೆ. ಅವರು ಬಸ್‌ನಲ್ಲಿ ಓಡಾಡಿದರು. ಸಮುದ್ರವನ್ನು ನೋಡಿದರು. ಆದರೆ ಅವರಲ್ಲಿ ಅದರಿಂದ ಯಾವ ಪ್ರತಿಕ್ರಿಯೆಯೂ ಉಂಟಾಗಲಿಲ್ಲ. ತುಂಬಾ ಜನರನ್ನು ನೋಡಿದಾಗ ಅವರಿಗೆ ಭಯವಾಯ್ತು. ಮೊದಲ ಸಲ ಹೊರಗೆ ಹೋದದ್ದರಿಂದ ಒಬ್ಬಳು ವೃದ್ಧೆ ಮೂರ್ಛೆ ಹೋದಳು. ಕೋಟೆಯ ಹೊರಗಿನ ಜೀವನ ಒಳಗಿನದಕಿಂತ ಇವರ ಪಾಲಿಗೆ ಭಿನ್ನವಲ್ಲ.

ನಾನು ನಿಸ್ತೇಜಿತಳಾಗಿ ಹೊರಬರುತ್ತೇನೆ. ದೇಹದ ಯಾವುದೋ ಒಂದು ಅಂಗ ಚಲನೆಗೊಳಗಾಗದೆ ಇದ್ದಾಗ ಅದು ನಿಷ್ಕ್ರಿಯವಾಗುವಂತೆ ಈ ಹೆಂಗಸರು ಪ್ರಕ್ರಿಯಿಸುವ, ಅನುಭವಿಸುವ ಶಕ್ತಿಯನ್ನು ಕಳೆದುಕೊಂಡಿದ್ದಾರೆಯೇ? ನನ್ನ ಪ್ರಶ್ನೆಗೆ ತಕ್ಷಣ ಉತ್ತರ ಸಿಗುತ್ತದೆ. ಶ್ರೀವೈಕುಂಠಂನಲ್ಲಿ ಇದ್ದಾಗ ನಾನು ಭೇಟಿಯಿತ್ತಿದ್ದ ಕುಟುಂಬವೊಂದರ ಹುಡುಗಿಗೆ ನಾನು ಅವಳ ಚಿಕ್ಕಮ್ಮನನ್ನು ಕರೆಯುವಂತೆ ಹೇಳುತ್ತೇನೆ. "ಆದರೆ ನಾನು ಮನೆಯಿಂದ ಹೇಗೆ ಹೊರಗೆ ಹೋಗುವುದು?" ಅವಳೆನ್ನುತ್ತಾಳೆ. ಆ ಹುಡುಗಿ ಹೈಸ್ಕೂಲು ಓದಿದ್ದಾಳೆ. ತಮಿಳು ಮ್ಯಾಗಜಿನ್‌ಗಳನ್ನು ಓದಿದ್ದಾಳೆ. ಅಡಿಗೆ ಮಾಡುವುದಕ್ಕೆ ಬರುತ್ತದೆ-ಆದರೆ ಅವಳು ಹೊರಗೆ ಹೋಗುವುದು ಅಪರೂಪ-ಅದೂ ಅವಳಪ್ಪನ ಜತೆ ಮಾತ್ರ. ಅವಳು ಮದುವೆಗೆ ರೆಡಿಯಾಗಿದ್ದಾಳೆ. ತನ್ನ ಅಕ್ಕನ ಮದುವೆಗೆ ಬರುವಂತೆ ಅವಳನ್ನು ಕರೆಯಲು ಅದೇ ಸಮಯಕ್ಕೆ ಹುಡುಗನೊಬ್ಬ ಬರುತ್ತಾನೆ.

ಹುಡುಗಿಗೆ ಆಗಲೇ 28–30 ವರ್ಷ ವಯಸ್ಸಾಗಿದ್ದು ಮದುವೆಯಾಗದೇ ಉಳಿದಿರು ವುದು ನಾಚಿಕೆಗೇಡಾದ್ದರಿಂದ ಅವಳು ಮುದುಕನೊಬ್ಬನ ಎರಡನೆಯ ಅಥವಾ ಮೂರ ನೆಯ ಹೆಂಡತಿಯಾಗಲಿದ್ದಾಳೆ ಎಂದು ಅವಳು ವಿವರಿಸುತ್ತಾಳೆ.

ಮಣ್ಣಿನ ಗೋಡೆಗಳು ಮಾತ್ರ ಈ ಹೆಂಗಸರನ್ನು ಕಟ್ಟಿ ಹಾಕಿಲ್ಲ. ಕೋಟೆಯ ಒಳಗಿನ ಸಮಸ್ಯೆಗಳ ಭಾರದಿಂದ ಈಗಾಗಲೇ ಅವರ ಗೋಡೆಗಳು ಕುಸಿಯುತ್ತಿವೆ. ಹೊರಬಂದ ಹೆಂಗಸರು ಈ ಜಗತ್ತಿಗೇನು ಆಗಂತುಕರಾಗುವುದಿಲ್ಲ. ಬಸ್ಸು, ರೈಲು, ಸಿನೆಮಾವನ್ನು ಅವರು ನೋಡಬಹುದು. ಆದರೆ ಹೊರಜಗತ್ತಿನ ಅಸಂಬದ್ಧ ಆಚಾರ ವಿಚಾರಗಳು, ಸಾಂಪ್ರದಾಯಿಕ ಮೌಢ್ಯಗಳು ಅವರತ್ತ ಮತ್ತೆ ಕೈಚಾಚಿ ಅವರನ್ನು ತನ್ನಲ್ಲಿ ಕರಗಿಸಿಕೊಂಡಿವೆ.

## ಬೋಳು ಮರ

ನಿನ್ನ ಬಯಕೆಯ ಚೀಲಗಳ ಯಾರೂ ತುಂಬಲಾರದೆ
ಬವಳಿ ಬೆಂಡಾಗಿ ನೀ ಮುರುಟಿದೆ
ಮನದ ಬೇಗೆಯೆಲ್ಲ ಮರದ ರೆಂಬೆ ರೆಂಬೆಗಳಲ್ಲಿ ಹರಿದಾಗ
ಆ ಬಿಸಿಗೆ ಚಿಗುರಿದ ಎಲೆಗಳು
ಒಣಗಿ ಉದುರಿತ್ತು
ನಿನ್ನೆದೆಯ ತಾಪದ ಅಗ್ನಿ ಜ್ವಾಲೆ ಸಿಡಿದಾಗ
ಮರ ಬರಡಾಯ್ತು, ಪೂರ್ತಿ ಬೋಳಾಯ್ತು

## ಬಿಚ್ಚುನಗು

ಒಳಗಿದ್ದ ದುಃಖ ನಿರಾಸೆಗಳು
ಆವಿಯಾಗಿ ಹೊರಬಿದ್ದು
ನೆಮ್ಮದಿ ಎದೆಯ ಬಟ್ಟಲಲ್ಲಿತುಂಬಿ ನಿಂತಾಗ
ಮೆಲು ಉಸಿರಿನ ತೃಪ್ತಿಯ ಗಾಳಿ
ಅಲ್ಲಲ್ಲಿ ಬೀಸಿ
ಹೊರಡುವ
ಜಲತರಂಗ

—ಕೆ. ಎಸ್. ಶಶಿಪ್ರಭ

# ‘ಕಂಚು ಕಾಮಕೂಟ ಶ್ರೀಗಳ ಪದವು’

ಕಂಚು ಕಾಮ ಕೂಟದಲ್ಲೆ ಕೆಂಪು ಬಾವುಟ
ತೊಡೆಗಳಿಕ್ಕಟ್ಟಿನಲ್ಲೆ ಲಿಂಗದಿಕ್ಕಟ

ವೀರ್ಯ ಪತನ ಜನನಗಾನ ಭಕ್ತ ಸಾಮರಸ್ಯವು
ನಮ್ಮ ಸೃಷ್ಟಿ ಮುಂದೆ ನಿಮ್ಮ ಜಾತಿ ಯಾವ ಲೆಕ್ಕವು

ಪಾದ ಯಾತ್ರೆ ಸೋಗಿನಲ್ಲೆ ನಾವು ಕನಸಿಗಾಸರೆ
ತೊಡೆ ಬಲಿತ ಮೊಲೆ ಚಿಗಿತ ಹೆಣ್ಗಳೆಲ್ಲ ಕೈಸೆರೆ

ನಮ್ಮ ದನಿಯು ಶುದ್ಧ ಅಷ್ಟೆ ಕಂಠ ಕಾಳ ಕೂಟ
ನಿಮ್ಮ ತೊಗಲ ಮೇಲೆ ವೇದ ಅಹಿಂಸೆ ಪಾಟ

ಮಾತು ಮೆದುಳು ಮಧ್ಯೆ ತಂತಿ ಇಲ್ಲವೆಂಬ ಚಿಂತೆ
ಹೊಟ್ಟೆ ದಪ್ಪ ಇದ್ದರಾಯ್ತು ಒಳಗೆ ನೂರು ಸುಳ್ಳು ಸಂತೆ

ಹಣ್ಣು ಇಟ್ಟ ತಾಟಿನಲ್ಲಿ ಚಿನ್ನ ನೋಟ ನೀಡಿ
ಮಕ್ಕಳಿಲ್ಲವೆಂಬ ಚಿಂತೆ ನಮಗೆ ಬಿಟ್ಟು ಬಿಡಿ

ಭಸ್ಮದೊಳಗಿನಂಗದಲ್ಲಿ ಜೋರು ಕಾಮ ಕಾತುರ
ಕೆಚ್ಚಲ ಸ್ಪರ್ಶ ಮಾತ್ರದಿಂದ ಕೊಡುವೆವು ನೂರು ಪುತ್ರರ

ಫಾರಿನ್ನಿಗೂ ಉಡಾಯಿಸಿದೆ ನಮ್ಮ ಗಂಧ ವಾಸನೆ
ಕೆರಳಿದೆ ಸುನಂದಳಲ್ಲೂ ಬಣ್ಣ ಬಣ್ಣದ ಕಾಮನೆ

ಚಿಂದಿ ಬಟ್ಟೆ ಜನ್ರು ಕಂಡ್ರೆ ನಮ್ಮ ಪಿತ್ತ ಕೆರಳ್ವದು
ಬೂದಿ ಇದೆ ಹಸಿವೆಗೆಂದು ಬೇಕೆಂದ್ರೆ ಬರ್ರಿಮಿಂದು

ಪತ್ರಿಕೇಲಿ ಸುದ್ದಿ ಬರ್ತೆಂದ್ರೆ ಸಾಕು
ಡಲಿತ್ರಿಗೆಲ್ಲ ಕೊಡವೆವು ಆಶೀರ್ವಾದದ ಕೇಕು

ಹೊರಗೆ ವೇದ ಬಾಧೆಯಾದ್ರೆ ಅಂತರಂಗ ಡಿಸ್ಕೊಥೆ
ಅಲ್ಲಿ ವಿಸ್ಕಿ ಸೋಡ ಜೊತೆಗೆ ಬೆಂದ ಕೋಳಿ ಸೀತೆ

ನಮ್ಮ ಪಾಲ್ಗೆ ಪಾರ್ಲಿಮೆಂಟು ಒಂದು ಸಣ್ಣ ಪೆಪ್ಪರ್ಮೆಂಟು
ಕುಂಟು ಮಂತ್ರಿಗೆ ದಂಟು ಕೊಟ್ಟು ಮಾಡುತ್ತೇವೆ ಸ್ಟಂಟು

ಕುಂ. ವೀರಭದ್ರಪ್ಪ

## ರೇಖಿ

ಗಾಳಿ ಬೀಸಿದ ಹಾದಿ ಬೀದಿಗಳುದ್ದಕ್ಕು
ರೇಖಿಳ ಓರೆಕೋರೆ-ಹಾದರ.
ನನ್ನ ನೋವು ನಲಿವುಗಳಿಗೆ
ಪಳೆಯುಳಿಕೆ-
ಬೀದಿಗಿಳಿದ ಬಸುರಿ.

ಹಾಳು ಬೀದಿಗಳಲ್ಲಿ ವಳ
ಕೆಂಪು ನರನಾಡಿ ವಿನ್ಯಾಸ.
ಎಂದಿಗೂ ಒಂಭತ್ತು ಕಾಣದ
ಭ್ರೂಣ ಹೊತ್ತ ಬಂಜೆ.
ಗಾಳಿ ಬೀಸಿದಂತೆ ನೃತ್ಯ
ದಿಕ್ಕು ಗಾಣಿಸುವ ಚಿತ್ತಾರ
ನನ್ನ ಅರ್ಥ, ಮಿಕ್ಕೆಲ್ಲರ ಅಂಗಿ
ಅಭಿಸಾರಿಕೆ.
ಓ, ನನ್ನ ರೇಖಿ!

ನೀನು ಎಲ್ಲ ಮಿತಿ ಮೀರಿದವಳು;
ರೇಖಿಳಾಗದ ಈ ರೇಖೆಗಳಿಗೆ
ಉಸಿರಾಡದ ಗಾಳಿಗಳಿಗೆ
ನಡೆಯಲಾಗದ ರಸ್ತೆಗಳಿಗೆ
ನೀನೆಟುಕುವೆಯ ? —
ಬಸುರಿಯಾಗಿಯೆ
ಉಳಿವ ಬಂಜೆ-ಅಭಿಸಾರಿಕೆ
ಏ ಬರಿಯೆ ರೇಖಿ.

— ಕೆ. ಎಸ್. ಶ್ರೀನಿವಾಸ ಮೂರ್ತಿ

## ಬಾವಲಿ

ಜರ್ಝರಿತ ಬದುಕ ಸುಳಿಗೆ, ಮನಸ್ಸು ಜೀಸತ್ತು
ಜೀವ ಸಿಕ್ಕಾಗಿ ಸಿಲುಕಿ
ಎಲ್ಲೆಲ್ಲೂ ಕಷ್ಟದಿಂದ ಕುಟುಕಿಸಿ ಕೊಳ್ಳುವಾಗ
ಎಲ್ಲೆಂದರಲ್ಲಿ, ಮೆದುಳಿನ ಮೂಲೆ ಮೂಲೆಗಳಲ್ಲೂ
ಜೋತು ಬೀಳುತ್ತದೆ
ಯೋಚನೆಯ
ಬಾ ವ
ಲಿ.

—ಕೆ. ಎನ್. ಶಶಿಪ್ರಭ

# ಚುನಾವಣಾ ಫಲಿತಾಂಶ—ಒಂದು ಮಾರ್ಗದರ್ಶಿ

—ಜಿ. ರಾಮಕೃಷ್ಣ

1977ರ ಪಾರ್ಲಿಮೆಂಟ್ ಚುನಾವಣೆಯ ನಂತರ ಮೇ ಆದಿಭಾಗದಲ್ಲಿ ಒಂದು ದಿನ ನಾನು ಮತ್ತು ನನ್ನ ಮಿತ್ರರಾದ ಕ. ನಂ. ನಾಗರಾಜು ಅವರು ದೆಹಲಿಯಿಂದ ಜಮ್ಮುವಿಗೆ ಪಂಜಾಬ್ ಸರ್ಕಾರದ ಬಸ್ಸೊಂದರಲ್ಲಿ ಪ್ರಯಾಣ ಮಾಡುತ್ತಿದ್ದೆವು. ಲೂಧಿಯಾನಾದ ಬಳಿ ಕಂಡಕ್ಟರಿಗೂ ಪ್ರಯಾಣಿಕರೊಬ್ಬರಿಗೂ ಯಾವುದೋ ವಿಷಯದ ಮೇಲೆ ತೀವ್ರವಾದವಾಗ್ಯುದ್ಧ ಪ್ರಾರಂಭವಾಯಿತು. ಪ್ರಯಾಣಿಕನು ತನ್ನ ಕಳಂಕರಹಿತ ವ್ಯಕ್ತಿತ್ವವನ್ನು ಸಾಬೀತು ಪಡಿಸಲು ತಾನು ಜನತಾ ಪಕ್ಷಕ್ಕೆ ಓಟು ಮಾಡಿದ್ದ ಅಂಶವನ್ನು ಒತ್ತಿ ಹೇಳಿದ. ಸಾಭ್ಯಸ್ಥತನಕ್ಕೆ ಅದಕ್ಕಿಂತಲೂ ಬೇರೆ ಪುರಾವೆ ಅನವಶ್ಯಕವೆಂದು ಅವನ ತೀರ್ಮಾನ, ಕಂಡಕ್ಟರ್ ಇದಕ್ಕೆ ಜಗ್ಗಲಿಲ್ಲ. "ನೀನೊಬ್ಬನೇ ಮರ್ಯಾದಸ್ಥನೇನು ? ನಾನೂ ಜನತಾ ಪಕ್ಷಕ್ಕೇ ಓಟು ಕೊಟ್ಟಿದ್ದು. ನಿನ್ನಷ್ಟೇ ಕಾಳಜಿ ಇರುವವನು ನಾನು",. ಎಂದಿತ್ಯಾದಿ ಮಾತುಗಳಿಂದ ಪ್ರಯಾಣಿಕನ ಬಾಯಿ ಮುಚ್ಚಿಸಿದ. ಇಂದಿರಮ್ಮನಿಗೆ ಓಟು ಮಾಡುವುದೆಂದರೆ ಪಿಶಾಚಿಗೆ ಓಟು ಮಾಡಿದಂತೆ ಎಂದವರಿಬ್ಬರ ಭಾವನೆಯೂ ಆಗಿತ್ತು. 1980ರ ಜನವರಿ 3 ಮತ್ತು 6 ರಂದು ಅವರಿಬ್ಬರೂ ಇಂದಿರಾಗಾಂಧಿ ಯವರ ಪಕ್ಷಕ್ಕೇ ಓಟು ಕೊಟ್ಟಿದ್ದಾರೆಂಬುದು ನನ್ನ ಗುಮಾನಿ.

ಮೂರು ವರ್ಷಗಳೂ ಕಳೆದಿಲ್ಲ. ಎಂತಹ ಆಮೂಲಾಗ್ರವಾದ ಬದಲಾವಣೆಯಾಗಿದೆ. ನಮ್ಮ ರಾಜಕೀಯ ಚಿಂತನೆ ಮತ್ತು ಚಾರಿತ್ರ್ಯಗಳಲ್ಲಿ ! ಹರಿಯಾಣಾ ರಾಜ್ಯದ ಈಚಿನ ಸಾಮೂಹಿಕ ಶರಣಾಗತಿ ಅಥವಾ ಹರಾಕಿರಿ ಈ ಪ್ರವೃತ್ತಿಗೆ ಅತ್ಯಂತ ಕಳವಳಕಾರಿ ನಿದರ್ಶನ. ರಾಜಕೀಯ ಪಕ್ಷಗಳ ಬಗ್ಗೆ ಮತ್ತು ಅವುಗಳ ಕಾರ್ಯಕ್ರಮಗಳ ಬಗ್ಗೆ ಅವುಗಳ ಬೆಂಬಲಿಗರಿಗೆ ಎಳ್ಳಷ್ಟಾದರೂ ನಿಷ್ಠೆ ಬೇಡವೆ ? "ತಪ್ಪೋ ಸರಿಯೋ ನನ್ನ ಪಕ್ಷ ಹೇಳಿದ್ದಕ್ಕೇ ನನ್ನ ಬೆಂಬಲ". ಎನ್ನುವಷ್ಟು ಹುಚ್ಚು ಪರಕಾಷ್ಟತೆಗೆ ಜನ ಹೋಗಬೇಕೆಂದು ಬಯಸದಿದ್ದರೂ'' ಇದು ನನ್ನ ಪಕ್ಷ. ಅದು ತಪ್ಪಿ ನಡೆದರೆ ಅದನ್ನು ತಿದ್ದಲು ನಾನು ಶ್ರಮವಹಿಸುತ್ತೇನೆ, ತಪ್ಪಿದರೆ ಅದಕ್ಕೆ ಕಾರಣ ಹುಡುಕಿ ಅದನ್ನು ತಿದ್ದುತ್ತೇನೆ''. ಎನ್ನುವಷ್ಟು ಮಟ್ಟಿನದಾದರೂ ಭಾವನೆ ಬೆಳೆಯದಿದ್ದ ಪಕ್ಷದಲ್ಲಿ ಎಂಥ ರಾಜಕೀಯ ಮುನ್ನಡೆ ಸಾಧ್ಯ ! ರಾಜಕೀಯ ಪಕ್ಷವೊಂದು ತನ್ನ ಅಭಿಮಾನಿಗಳಲ್ಲಿ ಇಂತಹ ಸಾಧಾರಣವಾದ ಪ್ರತಿಕ್ರಿಯೆಯನ್ನು ಸಹ ಗಳಿಸಿಕೊಳ್ಳಲು ಅಶಕ್ತವಾದರೆ ಅದರ ಯೋಗ್ಯತೆಗೇನು ಹೇಳಬೇಕು ? ಮೂವತ್ತು ತಿಂಗಳುಗಳ ಆಡಳಿತದಲ್ಲಿ ತನ

ವರ್ಚಸ್ಸನ್ನು ಸಂಪೂರ್ಣವಾಗಿ ನಿರ್ಮೂಲನಗೊಂಡ ಜನತಾಪಕ್ಷದ ಅದ್ಭುತ ಸಾಧನೆಗೆ ಸಮನಾದ ಇನ್ನೊಂದು 'ಪವಾಡ' ಬಹುಶಃ ದೊರೆಯಲಾರದು.

ರಾಜಕೀಯ ಕ್ಷೇತ್ರದಲ್ಲಿ ಒಂದು ರೀತಿಯ ಸಂದಿಗ್ಧತೆ ಏರ್ಪಟ್ಟಿದೆಯೆನ್ನುವುದು ಈಚಿನ ಚುನಾವಣೆಯಿಂದ ಸ್ಪಷ್ಟವಾಗಿದೆ. ಜನಗಳ ಜೊತೆ ವ್ಯವಹಾರ ಮಾಡಿ ರಾಷ್ಟ್ರೀಯ ಜೀವನದಲ್ಲಿ ಅವರು ಪಾಲ್ಗೊಳ್ಳುವಂತೆ ಮಾಡುವಂತಹ ಕಾರ್ಯಕ್ರಮ ಇಲ್ಲದಿದ್ದಾಗ ಶಾಸಕರು ಕಮಂಗಿಗಳಂತೆ ಒಂದು ಪಕ್ಷದಿಂದ ಇನ್ನೊಂದಕ್ಕೆ ಹಾರುವ ಲಾಭದಾಯಕ ಹವ್ಯಾಸವನ್ನಿಟ್ಟುಕೊಂಡಿರುವಂತೆ ಜನರು ಯಾವ ಲಾಭವನ್ನೂ ಪಡೆಯುವ ಆಸೆಯನ್ನು ತೊರೆದು ಮಂಕಾಗಿ ಕೇವಲ ಕೋಪ ಮತ್ತು ಅಸಂತುಷ್ಟಿಗಳಿಂದಾಗಿ ಒಮ್ಮೊಮ್ಮೆ ಒಂದೊಂದು ಪಕ್ಷದತ್ತ ವಾಲುವ ಡೋಲಾಯಮಾನ ಚಿತ್ತದವರಾಗ ಬೇಕಾಗುತ್ತದೆ. ಅವರು ಬೆಂಬಲ ನೀಡುವ ಪಕ್ಷದಿಂದ ಅವರ ಮಹತ್ತರವಾದುದನ್ನೇನೂ ಅಪೇಕ್ಷಿಸುವುದಿಲ್ಲ, ಅಪೇಕ್ಷಿಸಲಾರರು. ಹಿಂದೆ ಬೆಂಬಲ ದೊರಕಿಸಿಕೊಂಡಿದ್ದವರ ಮುಖಕ್ಕೆ ಮಸಿಬಳಿದು ಅವರನ್ನು ಕಸದ ಬುಟ್ಟಿಗೆ ಹಾಕುವುದಷ್ಟೇ ಅವರ ಶಕ್ತಿ ಮತ್ತು ಸಂತೋಷ. ಕ್ರಿಯಾತ್ಮಕ ವಿಶ್ಲೇಷಣೆಯಾಗಲಿ ದೂರದೃಷ್ಟಿಯ ಆದರ್ಶ ರಾಜಕೀಯವಾಗಲಿ ಇಂತಹ ಹಿನ್ನೆಲೆಯಲ್ಲಿ ಆಗಿಬರಲಾರವು. ರಾಷ್ಟ್ರದ ಆರ್ಥಿಕ ತಹಬಂದಿಗೆ ಮತ್ತು ಪ್ರಜಾಪ್ರಭುತ್ವ ನೀತಿಯ ಬೆಳವಣಿಗೆಗೆ ಇದು ಬಹಳ ಮಾರಕವಾದದ್ದು. ಜನತಾ ಪಕ್ಷ ಮತ್ತು ಇಂದಿರಮ್ಮನವರ ಪಕ್ಷ ರಾಷ್ಟ್ರವನ್ನು ಕೊಂಡೊಯ್ದಿರುವುದು ಇಂತಹ ಪ್ರಪಾತಕ್ಕೆ.

ಯಾರೂ ನಿರೀಕ್ಷಿಸಿರದಂತಹ ಚುನಾವಣಾ ಫಲಿತಾಂಶ ಈಗಿನ ಲೋಕ ಸಭಾ ಚುನಾವಣೆಯಲ್ಲಿ ಹೊರಬಿದ್ದಿತು. 1977ರಲ್ಲಿದ್ದುದಕಿಂತಲೂ ಕಡಿಮೆ ಪ್ರಮಾಣದ ಶೇಕಡಾವಾರು ಮತನೀಡಿಕೆಯಲ್ಲಿ ಒಟ್ಟು ಮತಗಳ ಶೇಕಡ ಐವತ್ತಕಿಂತಲೂ ಕಡಿಮೆ ಓಟುಗಳನ್ನು ಪಡೆದ ಇಂದಿರಾ ಪಕ್ಷ ಸಂವಿಧಾನವನ್ನು ಹೇಗೆ ಬೇಕಾದರೂ ಬದಲಾಯಿಸಲು ಸಾಕಾಗುವಷ್ಟು ಸ್ಥಾನಗಳನ್ನು ಲೋಕಸಭೆಯಲ್ಲಿ ಗಿಟ್ಟಿಸಿಕೊಂಡಿದೆ. ಜನತಾಪಕ್ಷ ಎಂದರೆ ಜನಮತದ ಪಕ್ಷ ಎಂಬಷ್ಟು ಅಗಾದವಾದ ಬೆಂಬಲದಿಂದ 1977ರಲ್ಲಿ ಆಯ್ಕೆಗೊಂಡಿದ್ದ ಮೊರಾರ್ಜಿ–ಚಂದ್ರಶೇಖರ್–ಬಾಬೂಜಿ–ದೇವರಸ್ ಅವರ ಪಕ್ಷ "ಆಟಕ್ಕುಂಟು ಲೆಕ್ಕಕ್ಕಿಲ್ಲ" ಎಂಬ ಪಕ್ಷದಂತಾಗಿದೆ. ಇದಕ್ಕೆಲ್ಲಾ ಬೇಜವಾಬ್ದಾರಿ ಪಕ್ಷಾಂತರಿಗಳೇ ಕಾರಣವೆಂದು ಚರಣ್–ರಾಜನಾರಾಯಣ್–ಲಿಮೆಯೆ ಅವರೆನ್ನೆಲ್ಲ ಮೂದಲಿಸಿದರೆ ಬಾಬೂಜಿಯವರ ಪಕ್ಷದವರಿಗೆ ಸಮಾಧಾನ ದೊರೆಯಬಹುದು, ವಾಜಪೇಯಿ, ಅದ್ವಾನಿ ಇವರೆಲ್ಲ ಮಾಡಿದ್ದೇ ಅದು. ಆದರೆ ಅದು ಪ್ರಶ್ನೆಗೆ ಉತ್ತರ ಕೊಟ್ಟಂತಾಗಲಿಲ್ಲ, ಕೇವಲ ಇನ್ನೊಂದು ಪ್ರಶ್ನೆಯನ್ನು ಎತ್ತಿದಂತಾಯಿತು, ಅಷ್ಟೆ. ಪಕ್ಷಾಂತರದ ಪಿಡುಗು ಜನತಾ ಪಕ್ಷವನ್ನೇಕೆ ಬಾಧಿಸಿತು ಎಂಬುವೇ ಆ ಪ್ರಶ್ನೆ. ಶಿಕ್ಷಣ, ಸಮೂಹ

ಮಾಧ್ಯಮ, ಅಧಿಕಾರದ ಮೂಲ ಅಂಗಗಳು, ಪಕ್ಷದ ಸಂಘಟನಾ ಯಂತ್ರ, ವಿದೇಶಿ ವ್ಯವಹಾರ ಶಾಖೆಗಳು, ಮಾರುಕಟ್ಟೆಯ ಪ್ರಮುಖ ನಾಳಗಳು, ಇವನ್ನೆಲ್ಲಾ ಆರ್. ಎಸ್. ಎಸ್.ನ "ಧೀಮಂತ ರಾಷ್ಟ್ರಪ್ರೇಮಿ" ಗಳು ಲಪಟಾಯಿಸಿಕೊಂಡು ಪಕ್ಷದ ಇತರರು ತಮ್ಮ ತಾಳಕ್ಕೆ ತಕ್ಕಂತೆ ಕುಣಿಯಬೇಕೆಂದು ಹೇಳಿದರೆ ಯಾರು ಒಪ್ಪುತ್ತಾರೆ ಮತ್ತು ಏಕೆ ಒಪ್ಪಬೇಕು? ಪಕ್ಷದಲ್ಲೇ ಪ್ರಜಾಪ್ರಭುತ್ವವನ್ನು ಧಿಕ್ಕರಿಸುವ ಮಾರ್ಗ ಹಿಡಿದು ರಾಷ್ಟ್ರಕ್ಕೆ ಪ್ರಜಾಪ್ರಭುತ್ವ ನೀಡಲು ಸಾಧ್ಯವೇ? ಆರ್.ಎಸ್.ಎಸ್‌ನ ಈ ನಸುಗುನ್ನಿಕಾಯಿತನವನ್ನು ಗುರುತಿಸದೆ ಈ ಜನತಾಪಕ್ಷವು ಒಡೆದು ಹೋದುದನ್ನು ಚರ್ಚಿಸುವುದು ಮೂರ್ಖತನ ಮತ್ತು ಕಡುಮೋಸ. ತಮ್ಮ ಶಕ್ತಿಗೆ ಮತ್ತು ಸ್ಥಾನಕ್ಕೆ ಇನ್ನು ಚ್ಯುತಿಯೇ ಇಲ್ಲವೆಂದು ರಾಜ್ಯಶಕ್ತಿಯನ್ನು ಸ್ವೇಚ್ಛೆಯಿಂದ ಬಳಸಿಕೊಂಡು ರಾಜಕೀಯ ವಿರೋಧಿಗಳನ್ನ ಮರ್ದಿಸ ಹೊರಟ ದೇವರಸ್ ದಂಡು ಜನತಾ ಪಕ್ಷದ ಮೂಲಕ್ಕೆ ನೀರನ್ನು ತಿದ್ದಿತು ಎನ್ನಬಹುದು. ಮತೀಯ ದ್ವೇಷ, ಹರಿಜನ ಕಗ್ಗೊಲೆ, ವಯಸ್ಕರ ಶಿಕ್ಷಣದ ಹೆಸರಿನಲ್ಲಿ ಬೊಕ್ಕಸದ ಲೂಟಿ, ನವೀನ ಇತಿಹಾಸದ ಪುಸ್ತಕಗಳ ರಚನೆಯಲ್ಲಿ ತೊಡಗುವ ದುಷ್ಟ ಸಾಹಸ, ಇದನ್ನೆಲ್ಲಾ ದಂಡವತೆ–ಚಂದ್ರಶೇಖರ್–ಬಾಬೂಜಿ ಇವರೆಲ್ಲ ಪ್ರಶ್ನಿಸಿದ್ದಿದ್ದರೆ ಅವರ ಪಕ್ಷದ ಗತಿಯೇ ಬೇರೆಯಾಗಿರಬಹುದಾಗಿತ್ತು. ಅದನ್ನು ಬಿಟ್ಟು "ಹರಿಜನ ಪ್ರಧಾನಿ" ಎಂಬ ಘೋಷಣೆ ನೀಡಿ ಅಧಿಕಾರಕ್ಕೆ ಬರಲು ಸಾಧ್ಯವೆ? ಹರಿಜನ ಎಂಬ ಒಂದೇ ಕಾರಣದಿಂದ ಬಾಬೂಜಿ ಪ್ರಧಾನಿಯಾಗಬೇಕಿತ್ತೆ? ಅದೊಂದೇ ಕಾರಣ ರಾಷ್ಟ್ರದ ಸಮಸ್ಯೆಗಳಿಗೆ ಪರಿಹಾರ ನೀಡುತ್ತದೆಯೆ? ವ್ಯಾಪಾರ ಸಂಸ್ಥೆಯವರು ಜಾಹಿರಾತು ಕಂಪೆನಿಗಳ ಆಶ್ರಯ ಪಡೆದು ತಮ್ಮ ಹೊಲಸು ಮಾಲನ್ನು ಮಾರಲು ಹವಣಿಸುವಂತೆ 42ಲಕ್ಷ ರೂಪಾಯಿನ ಜಾಹಿರಾತು ಕಂಟ್ರಾಕ್ಟನ್ನು ಒಂದು ಕಂಪೆನಿಗೆ ನೀಡಿ ಜನತಾಪಕ್ಷ ಅಧಿಕಾರಕ್ಕೆ ಬರಲು ಪ್ರಯತ್ನಿಸಿದ್ದು ಆ ಪಕ್ಷ ದೊಡ್ಡ ಬಂಡವಾಳಿಗರ ಕೈಗೂಸು ಎಂಬುದಕ್ಕೆ ಇನ್ನೊಂದು ನಿದರ್ಶನವಾಯಿತು, ಅಷ್ಟೇ! ಹೀಗಾಗಿ ಜಿದ್ದಿನಿಂದ ಆ ಪಕ್ಷಕ್ಕೆ ಜನ ಮಣ್ಣು ಮುಕ್ಕಿಸಿದರು. ಆ ಪಕ್ಷಕ್ಕೆ ಇಷ್ಟು ಹೀನವಾದ ಸೋಲುಂಟಾದುದಕ್ಕೆ ಯಾರು ಕಣ್ಣೀರು ಸುರಿಸಿದ್ದಾರೋ ತಿಳಿಯದು.

ಇನ್ನು ಲೋಕದಳ. ನೆಹರೂ ಅವರನ್ನು ನಿರ್ನಾಮಗೊಳಿಸುವ ಏಕೈಕ ಧೋರಣೆ ಆ ಪಕ್ಷದ ಪರವಾಗಿ ಪ್ರಧಾನಿಯಾಗಿ ತಮ್ಮ ಜೀವನದ ಹೆಬ್ಬಯಕೆಯನ್ನು ಈಡೇರಿಸಿಕೊಂಡ ಚರಣಸಿಂಗರದು. ಅಸಂಘಟಿತರ ಪರವಾಗಿ ನಿರರ್ಗಳವಾಗಿ ಮಾತನಾಡುವ ಈ ಭೂಮಾಲಿಕರ ಪ್ರತಿನಿಧಿಗೆ ಕೋಡಂಗಿಯೊಬ್ಬನ ಬಲವಾದ ಒತ್ತಾಸೆ! ಪಾಳ್ಯಗಾರ ಪರಂಪರೆಯ ಮುತ್ಸದ್ದಿತನವನ್ನು ಈ ರಾಷ್ಟ್ರ ಎಂದೋ ತಿರಸ್ಕರಿಸಿದೆ. ಅದನ್ನು ಯಾವ ರೂಪದಲ್ಲಿ ಮತ್ತೆ ಜೀವಂತಗೊಳಿಸಲು ಜನ ತಯಾರಿಲ್ಲ. ಆರ್. ಎಸ್. ಎಸ್. ಅನ್ನು ಕಟುವಾಗಿ ಟೀಕಿಸಿದ ರಾಜನಾರಾಯಣರ ಮತಾಂಧತೆ ಮತ್ತು ಮದಾಂಧತೆ ದೇವರಸ್ ಗುಂಪಿನವರ ಗುಣಗಳಿಗಿಂತ ಭಿನ್ನವಲ್ಲ. ಅವರ

ಆರ್. ಎಸ್. ಎಸ್. ವಿರೋಧ ಆ ಸಂಸ್ಥೆಯ ನಿಯಮ ಮತ್ತು ವಿಚಾರಧಾರೆಗಳ ವಿರೋಧವಲ್ಲ, ಪ್ರಮುಖ ಸ್ಥಾನಗಳನ್ನು ಲಪಟಾಯಿಸಿಕೊಂಡ ಆರ್. ಎಸ್. ಎಸ್.ನ ಬುದ್ಧಿವಂತಿಕೆಯನ್ನಷ್ಟೆ ಅವರು ವಿರೋಧಿಸಿದ್ದು. ಆರ್ಥಿಕನೀತಿ, ಕಾರ್ಮಿಕನೀತಿ, ಶಿಕ್ಷಣನೀತಿ, ವಿದೇಶಾಂಗನೀತಿ, ಸಾಮಾಜಿಕ ಚೌಕಟ್ಟಿನ ಬಗೆಗಿನ ನೀತಿ ಇವುಗಳೆಲ್ಲಾ ಆರ್. ಎಸ್. ಎಸ್. ಮತ್ತು ರಾಜನಾರಾಯಣ್ ಬಹುಮಟ್ಟಿಗೆ ಏಕಾಭಿಪ್ರಾಯವುಳ್ಳವರು.

ಇಂಥ ಮಹಾತ್ಮದ್ವಯರ ಜೊತೆಯಲ್ಲಿ ದೇವರಾಜ ಅರಸರ ಅಸ್ತಿತ್ವ ಇಲ್ಲದ ಕಾಂಗ್ರೆಸ್ ಜೊತೆಗೂಡಿ ಸ್ವಲ್ಪ ಚೇತನ ಪಡೆಯಿತು, ನಿಜ. ಆದರೆ ಕೊನೆಯುಸಿರಿನಿಂದ ಜೀವಿಸುವ ಪಕ್ಷ ವರ್ತಮಾನ ಮತ್ತು ಭವಿಷ್ಯತ್ತಿನ ಪಕ್ಷವಾಗಲಾರದು.

ಹೀಗಾಗಿ, ಕಣ್ಣೀರು ಸುರಿಸಿ ಹೃದಯ ಸೂರೆ ಮಾಡುವ ಮಾತು, ದೈವಭಕ್ತಿಯಿಂದ ಪರವಶಳಾಗುವ ಮಹಾಮಾಯೆ, ಹಣದ ಕೊರತೆಯಿಲ್ಲದ ಪ್ರಭಾವಿ ರಾಜಕಾರಣಿ ಇಂದಿರಮ್ಮನವರ ಪುನರಾಗಮನವಾಯಿತು. ಅವರೊಟ್ಟಿಗೆ ಸಂಪೂರ್ಣ ವಾನರಸೇನೆಯೂ ಮರಳಿ ಅಧಿಕಾರದ ಪ್ರಾಂಗಣದಲ್ಲಿ ಬೀಡುಬಿಟ್ಟಿದೆ. ಕಾನೂನು ಮತ್ತು ಪ್ರಜಾಜೀವಿಗಳ ಬಗ್ಗೆ ಈಗಾಗಲೆ ಇಂದಿರಮ್ಮನವರೂ ಅವರ ಭಕ್ತಮಂಡಲಿಯವರೂ ತಮ್ಮ ಅನಿಸಿಕೆಗಳನ್ನು ಹೊರಗೆಡೆಹಿದ್ದಾರೆ. ಇಂದಿನ ಬಂಡವಾಳಶಾಹಿ ವ್ಯವಸ್ಥೆಯನ್ನೇ ರಕ್ಷಿಸಲು ಬೇಕಾಗಿರುವ ಕಾನೂನನ್ನು ಬದಲಾಯಿಸಲಿಚ್ಛಿಸಿ ಹೋರಾಟ ಮಾರ್ಗಕ್ಕಿಳಿಯುವವರಿಗೆ ಅದೊಂದು ಎಚ್ಚರದ ಕಿವಿಮಾತು. ಸರ್ವತಂತ್ರ ಸ್ವತಂತ್ರರೂ ರಾಷ್ಟ್ರದ ಅಪ್ರತಿಮ ಮೇಧಾವಿಗಳೂ ಆದ ಪ್ರೀತಿಯ ಕುವರ ಸಂಜಯಗಾಂಧಿ ತಮ್ಮ ಹಳೆಯ ಎಲ್ಲ ಕಲ್ಯಾಣ ಗುಣಗಳ ರುಚಿಯನ್ನು ರಾಷ್ಟ್ರಕ್ಕೆ ತೋರಿಸಲು ಈಗಾಗಲೆ ಸೂಕ್ತವಾದ ಸೂಚನೆಗಳನ್ನು ನೀಡಿದ್ದಾಗಿದೆ. ಮರಗಳನ್ನು ನೆಡಿ, ಆದಕ್ಕೆ ನೀರು ಹಾಕಿಕೊಂಡು ಪ್ರಾಣ ಬಿಡಿ, ಇತ್ಯಾದಿ ನಾಲ್ಕೋ ಐದೋ ಅಂಶಗಳ ಕಡುನೀತಿ ಅಚ್ಚಿನ ಮನೆಯಿಂದ ಸದ್ಯದಲ್ಲೇ ಹೊರಬರುತ್ತದೆ. ಕೈಗಾರಿಕಾ ಸಂಬಂಧಗಳ ಮಸೂದೆ ಮತ್ತು ಅದರ ತಾತನಂತಹ ಮಸೂದೆಗಳು ಅವರ ತಲೆಯಲ್ಲಿ ಆಗಲೇ ಗುಂಗಿಡುತ್ತವೆ. ಎಲ್ಲ ರಾಜ್ಯಗಳ ಎಲ್ಲ ಸಮಸ್ಯೆಗಳನ್ನು ಇಂದಿರಾಜಿಯವರ ಪಕ್ಷ ತಮ್ಮ "ಮಹಾ ನೇತಾರರ" ತೀರ್ಮಾನಕ್ಕೊಪ್ಪಿಸುವ ಪರಿಪಾಠದ ಪುನರಾವರ್ತನೆ ಪ್ರಾರಂಭವಾಗಿದೆ. "ಉತ್ಪಾದನೆ ಹೆಚ್ಚಿಸಿ, ಹೆಚ್ಚು ಕೆಲಸ ಮಾಡಿ, ಆಂದೋಳನಗಳಿಗೆ ರಜಾ ಘೋಷಿಸಿ, ಬಂಡವಾಳಶಾಹಿ ಮತ್ತು ಸಮಾಜವಾದ ಎಂಬುವುಗಳನ್ನು ಭೇದದಿಂದ ಕಾಣುವುದು ಅಪ್ರಸ್ತುತ, ಕಮ್ಯುನಿಸ್ಟರು ರಾಷ್ಟ್ರದ್ರೋಹಿಗಳು", ಇತ್ಯಾದಿ ವೇದ ಘೋಷ ಬಹಳ ದೂರವಿಲ್ಲ. "ಎಲ್ಲೆಲ್ಲಿಯೂ ಸಲ್ಲದವರು ನಮ್ಮಲ್ಲಿ ಸಲ್ಲುತ್ತಾರೆ", ಎಂಬ ಉದಾರ ಪರಿಪಕ್ವ ರಾಜಕೀಯ ತತ್ವದ ಆಧಾರದ ಮೇಲೆ ಭಜನ್. ಲಾಲ್,

ಮೋಹನ್ ಲಾಲ್, ಇತ್ಯಾದಿ ಎಲ್ಲ ಲಲ್ಲಾಗಳನ್ನು ಕಲೆಹಾಕಿಕೊಂಡು ರಾಷ್ಟ್ರಕ್ಕೆ ಪ್ರಜಾಪ್ರಭುತ್ವವನ್ನು ಉಳಿಸಲಾಗುತ್ತದೆ! ಯಾವ ಪ್ರಕರ್ಷ ಆರ್ಥಿಕ ನೀತಿಯನ್ನು ಅನುಸರಿಸದೆ ಮಾತಿನಲ್ಲೇ ಶ್ರೀಮಂತಿಕೆಯ ಸೌಧಗಳನ್ನು ಕಟ್ಟಿ ನಾಡಿನ ಬಡಜನರಿಗೆಲ್ಲ ಬಳುವಳಿ ನೀಡಲಾಗುತ್ತದೆ. ಇನ್ನೂ ಏನೇನೊ ವಿಹಾರಗಳನ್ನು ಕಲ್ಪಿಸಿಕೊಡಲು ಹೊಂಚುಹಾಕುತ್ತಾರೋ ಕಾದು ನೋಡಬೇಕು, ಅನುಭವಿಸಿ ತಿಳಿದುಕೊಳ್ಳಬೇಕು.

ಹೋರಾಟದ ಮಾರ್ಗವಲ್ಲದೆ ಅನ್ಯಮಾರ್ಗವಿಲ್ಲ, ತಾತ್ವಿಕ ನೆಲೆಯಿಂದ ನಿಷ್ಠೆಯ ಪ್ರಬಲ ಹೋರಾಟ ಮಾಡಲು ಜನ ಸಿದ್ಧರಿದ್ದಾರೆ, ಅಂತಹವರು ತಮ್ಮ ಪಕ್ಷವನ್ನು ದಿಢೀರನೆ ಆರಿಸಿಕೊಳ್ಳುವುದೂ ಇಲ್ಲ ತೊರೆಯುವುದೂ ಇಲ್ಲ, ಪುರೊಗಾಮಿ ದೃಷ್ಟಿಕೋನವನ್ನು ಸೈಜವಾಗಿ ಬೆಳೆಸಿಕೊಂಡು ಕ್ರಾಂತಿಕಾರಿ ಚಳುವಳಿ ನಡೆಸುವಂತಹ ಪಕ್ಷವಿದ್ದರೆ ಅದುಜನರ ಪಕ್ಷ, ಆ ಪಕ್ಷ ನಮ್ಮೊಡನೆ- ನಾವು ಆ ಪ ಕ್ಷ ದೊ ಡ ನೆ ಇಂದಿರಮ್ಮನೂ ಬೇಡ ಬಾಬೂಜಿಯೂ ಬೇಡ- ಕೆಂಪು ಬಾವುಟವೇ ನಮ್ಮ ವೀರ ಪತಾಕೆ, ಇಂದಿನ ಮತ್ತು ಮುಂದಿನ ಪಕ್ಷ ಕಮ್ಯುನಿಸ್ಟ್ ಪಕ್ಷ ಮತ್ತು ವಾಮವಾದಿ ರಂಗ, ಎಂಬ ಹುಮ್ಮಸ್ಸಿನ ಉತ್ತರವು ಈ ಚುನಾವಣೆಯಲ್ಲಿ ನಿಸ್ಸಂಶಯವಾಗಿ ಹೊರ ಬಂದಿದೆ. ಭೇದಿಸಲಾಗದ ತಮ್ಮ ಭದ್ರ ಕೋಟೆಗಳನ್ನು ತಿಳಿಸಿಕೊಂಡು ಎಡ ಪಕ್ಷಗಳು ರಾಷ್ಟ್ರದ ರಾಜಕೀಯಕ್ಕೆ ಹೊಸ ಅರ್ಥವನ್ನು ಆದರ್ಶವನ್ನು ನೀಡಿವೆ. ತಮ್ಮ ಚಿಂತನೆ ಮತ್ತು ಹೋರಾಟಗಳಿಂದ ಲೋಕಸಭೆಯಲ್ಲಿರುವ ತಮ್ಮ 53 ಪ್ರತಿನಿಧಿಗಳೆಂದರೆ ಕೇವಲ 53 ವ್ಯಕ್ತಿಗಳಲ್ಲ, ಮತಗಳಲ್ಲ ಎಂಬುದನ್ನು ಈ 53 ಸದಸ್ಯರ ಪಕ್ಷಗಳು ಕಾರ್ಯತಃ ಮಾಡಿ ತೋರಿಸಲು ಶಕ್ತವಾಗಿವೆ ಮತ್ತು ಬದ್ಧವಾಗಿವೆ. ಆ ಪಕ್ಷಗಳ ಶಕ್ತಿ ಹಣದಿಂದ ಬಂದಿರುವ ಶಕ್ತಿಯಲ್ಲ ಕೇವಲ ಪ್ರಜ್ಞೆಯಿಂದ ಬಂದಿರುವ ಶಕ್ತಿಯೂ ಅಲ್ಲ ಅದು ಕಮ್ಮಾರನ ಕಸಾಲೆಯಲ್ಲಿ ಹೋರಾಟದ ಬೆಂಕಿಯಿಂದ ಹೊತ್ತಿಕೊಂಡು ಬಂದಿರುವ ಕಂದಲಾಗದ ಜ್ವಾಲೆ, ವೀರ ಪರಂಪರೆಯ ಸಂಕೇತ, ನಿಷ್ಕೃಷ್ಟವಾದ ಆರ್ಥಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಇಚ್ಛೆ ಮತ್ತು ಶಕ್ತಿ ಎರಡೂ ಇರುವ ಪಕ್ಷಗಳೆಂದರೆ ಎಡ ಪಕ್ಷಗಳು. ತಿರವಾಂಕೂರಿನಲ್ಲಿ ಪದ್ಮನಾಭ, ಗುರುವಾಯೂರಿನ ಶ್ರೀ ಕೃಷ್ಣ, ಕಲ್ಕತ್ತೆಯ ಕಾಳಿ, ತಿರುಪತಿಯ ಪಂಗನಾಮಧಾರಿ, ಪುರಿಯ ಜಗನ್ನಾಥ ದೆಹಲಿಯ ಇಮಾಂ ಮತ್ತು ರೋಮಿನ ಪೋಪ್, ಇವರೆಲ್ಲರಿಗಿಂತಲೂ ಭಾರತದ ಪ್ರಜ್ಞಾವಂತ ಪ್ರಜೆ ಹೆಚ್ಚಿನ ಶಕ್ತಿಶಾಲಿ ಎಂಬುದನ್ನು ಬಂಗಾಳ, ಕೇರಳ ಮತ್ತು ತ್ರಿಪುರ ತೋರಿಸಿಕೊಟ್ಟಿವೆ. ಟಾಟಾ- ಬಿರ್ಲಾ- ಸಾಹುಜೈನ್- ಗೋಯೆಂಕ ಬಣಕ್ಕೆ ಬದಲಾಗಿ ಈಎಮ್ಮೆಸ್_ ರಾಜೇಶ್ವರ ರಾವ್- ತ್ರಿದಿಬ್_ ಚಿತ್ತ ಬಸು ಅವರನ್ನು ಆರಿಸಿಕೊಂಡಿವೆ. ಭಾರತದ ಇತರ ರಾಜ್ಯಗಳೂ ಮುಂದೆ ಬಂಗಾಳ-ಕೇ ರ ಳ ಗ ಳ ಹಾದಿಯಲ್ಲೇ ಸಾಗಬೇಕು. ಕುರುಡು ಪಕ್ಷ ಮತ್ತು ಖಿಚಡಿ ಪಕ್ಷಗಳನ್ನುಳಿದು ಬೇರೊಂದು ವಾಮವಾದಿರಂಗ ಅಧಿಕಾರೂಢವಾಗಲೂ ಸಮರ್ಥವಾಗಿದೆ ಎಂಬುದನು

ಐಕ್ಯ ಹೋರಾಟಗಳಿಂದ ಜನರ ಮುಂದಿಟ್ಟರೆ ಇಂದಿರಮ್ಮನ ಗಾಳಿಯನ್ನು ದೇವರಸರ ಅರ್ಭಟವನ್ನು ತಡೆದು ಎಡ ಪಕ್ಷಗಳನ್ನು ಅಚಲವಾಗಿ ಬೆಂಬಲಿಸಿ ನಿಲ್ಲಲು ಭಾರತದ ಮತದಾರ ಸಿದ್ಧನಿದ್ದಾನೆ ಎಂಬುದನ್ನು ಲೋಕಸಭಾ ಚುನಾವಣೆ ಮತ್ತು ಕೇರಳದ ಶಾಸನ ಸಭಾ ಚುನಾವಣೆ ತೋರಿಸಿಕೊಟ್ಟಿವೆ. ಮತದಾರನೂ - ಹೋರಾಟಗಾರನೆ ಆದಾಗ ಅವನ ಪಕ್ಷ ಹೋರಾಡುವ ಪಕ್ಷ ಮಾತ್ರ ಬಂ ಗಾ ಳ– ಕೇ ರ ಳ ಇಂದು ಮಾಡಿರುವುದನ್ನು ಇತರ ರಾಜ್ಯಗಳು ಮುಂದೆ ಮಾಡುವಂತಾಗಬೇಕಾದರೆ ಎಡ ಪಕ್ಷಗಳ ಜವಾಬ್ದಾರಿ ಅತ್ಯಂತ ಮಹತ್ವದ್ದಾಗಿದೆ. ಘೋಷಣೆಗಳ ಮುಸುಕಿನಲ್ಲಿ ಮೈಮರೆಯು ವುದು, ಸಿನಿಕತನದಿಂದ ಬಾಯಿ ಚಪ್ಪರಿಸುವುದು, ಸರ್ವನಾಶವಾಗಿ ಹೋಗಿದೆಯೆಂದು ಬಿಲದೊಳಗೆ ನುಸುಳಿಕೊಳ್ಳಲು ನೋಡುವುದು, ಕಲ್ಪನಾ ವಿಲಾಸಿಗಳಾಗಿ ಪ್ರತಿಪಾದನೆಗ ಳಲ್ಲೇ ಮುಳುಗಿ ಬೆನ್ನುತಟ್ಟಿಕೊಳ್ಳುವುದು, ಇವನ್ನೆಲ್ಲ ಬಿಟ್ಟು ಹೋರಾಟದ ಕಣಕ್ಕಿಳಿ ಯಲು ನಾವೆಲ್ಲ ಸಿದ್ಧರಾದರೆ ಇಂದಿರಮ್ಮನವರ ಭೀತಿಯಿಂದ ಯಾರೂ ನಡುಗಿ ಕುಸಿಯಬೇಕಾಗಿಲ್ಲ. "ಜನರಿಗೆ ನಾಯಕತ್ವಕೊಡಬೇಕಿದ್ದರೆ ಮೊದಲು ಜನರಿಂದ ಕಲಿಯಬೇಕು". –ಗಾಂಧಿ ಮತ್ತು ಲೆನಿನ್ ಅದನ್ನು ಯಶಸ್ವಿಯಾಗಿ ಮಾಡಿದರು. ಬಂಗಾಳ ಮತ್ತು ಕೇರಳಗಳಲ್ಲಿ ಅದರ ಛಾಯೆ ಕಾಣುತ್ತಿದೆ. ಅದು ಹಬ್ಬಲು 1980 ರ ಚುನಾವಣೆ ನಮ್ಮ ಕಣ್ಣುತೆರೆಯಿಸಿದರೆ ಚುನಾವಣೆ ನಿರರ್ಥಕವೆನಿಸಿಕೊಳ್ಳುವುದಿಲ್ಲ.

●

# ತುರ್ತು ಪರಿಸ್ಥಿತಿಗೆ ಮುನ್ನುಡಿ
## ಪುಸ್ತಕ ಪರಿಚಯ

—ಐ. ಆರ್. ಪ್ರಮೋದ್

[THE HOODLUM YEARS : ASHOK MITRA, ORIENT LONGMAN]

ಇಂಡಿಯಾ ನಾಳೆ ಯೋಚಿಸುವುವನ್ನು ಬಂಗಾಳ ಇವತ್ತು ಯೋಚಿಸುತ್ತದೆ ಎನ್ನುವ ಮಾತಿದೆ. ತುರ್ತುಪರಿ ಸ್ಥಿತಿಯ ವಿಚಾರದಲ್ಲೂ ಈ ಮಾತು ಸತ್ಯ ಎನ್ನಿಸಿದೆ. ಯಾಕೆಂದರೆ ಅಖಿಲ ಭಾರತ ಮಟ್ಟದಲ್ಲಿ ನಡೆದ ತುರ್ತುಪರಿ ಸ್ಥಿತಿ ದಬ್ಬಾಳಿಕೆಯ ರಿಹರ್ಸಲ್ ಪಶ್ಚಿಮ ಬಂಗಾಲದಲ್ಲಿ 1972ರಲ್ಲಿಯೇ ನಡೆದಿತ್ತು. ಆ ದಿನಗಳ ಕ್ರೌರ್ಯ ಗೂಂಡಾಗಿರಿಯ ಬಗ್ಗೆ ಅಶೋಕಮಿತ್ರ ನಿಯತಕಾಲಿಕವಾಗಿ ಬರೆದ ಲೇಖನಗಳ (ಮುಖ್ಯವಾಗಿ ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿಯಲ್ಲಿ ಪ್ರಕಟವಾದವು) ಸಂಕಲನ ಈ ಪುಸ್ತಕ. ಪುಸ್ತಕದ ಹೆಸರೇ ಸೂಚಿಸುವಂತೆ ನಿರ್ದಿಷ್ಟವಾಗಿ ಪಶ್ಚಿಮ ಬಂಗಾಳದಲ್ಲಿ ನಡೆದ ಅಮಾನುಷ ದಬ್ಬಾಳಿಕೆಯ ವಿವರ ಮತ್ತು ಆಗಿನ ಮ್ಯಾಡಮ್ ಪ್ರಧಾನ ಮಂತ್ರಿಯ ದೆಹಲಿ ಪ್ರಭುತ್ವ ಕೈಗೊಳ್ಳುತ್ತಿದ್ದ ಆರ್ಥಿಕ ಕ್ರಮಗಳ ವಿಡಂಬನೆ ಪುಸ್ತಕದ ವಸ್ತು.

ಈಗ ಪಶ್ಚಿಮ ಬಂಗಾಳದ ಎಡ ಪಕ್ಷಗಳ ಸಂಯುಕ್ತ ರಂಗದ ಸರ್ಕಾರದ ಹಣ ಕಾಸಿನ ಮಂತ್ರಿಯಾಗಿರುವ ಅಶೋಕಮಿತ್ರ ಇಂಡಿಯಾದ ಖ್ಯಾತ ಅರ್ಥ ಶಾಸ್ತ್ರಜ್ಞ. ಕೃಷಿ ಬೆಲೆಗಳ ಆಯೋಗದ ಅಧ್ಯಕ್ಷರೂ ಭಾರತ ಸರ್ಕಾರಕ್ಕೆ ಮುಖ್ಯ ಆರ್ಥಿಕ ಸಲಹೆಗಾರರೂ ಆಗಿದ್ದವರು. ಹಲವಾರು ಅರ್ಥ ಶಾಸ್ತ್ರ ಗ್ರಂಥಗಳ ಲೇಖಕರು.

ಅಶೋಕ ಮಿತ್ರರ ಭಾಷೆ ಹರಿತವಾದ ವ್ಯಂಗ್ಯದಿಂದ ಸತ್ವ ಪೂರ್ಣವಾಗಿದೆ. "ಕಳ್ಳರ ಒಂದು ಸರ್ಕಾರ" 'ಹಕ್ಕಿಗಳು ಹಾಡುವುದಿಲ್ಲ' 'ತಮ್ಮ ಕಾವ್ಯವನ್ನು ಮಾಡುವುದು ಅವರಿಗೆ ಸಾಧ್ಯವಿಲ್ಲ'–ಕೆಲವು ಲೇಖನಗಳ ತಲೆ ಬರಹಗಳು. ಅರ್ಥ ಶಾಸ್ತ್ರಜ್ಞನ ನಿರ್ದಿಷ್ಟತೆಯಿಂದ ಆರ್ಥಿಕ ಸಮಸ್ಯೆಗಳನ್ನು ವಿಶ್ಲೇಷಿಸುವ ಅಶೋಕ ಮಿತ್ರರ ಬರವಣಿಗೆ ಈ ದೇಶದ ದಲಿತರ ಬದುಕಿನ ವಿವರಗಳನ್ನು ಪರಿಚಯಿಸುವಾಗ ಆಳವಾದ, ದಟ್ಟವಾದ ನೋವಿನಿಂದ ತುಂಬಿದೆ. ಉದಾಹರಣೆಗೆ ಅವರು ಮಳೆಗಾಲದ ಕಲ್ಕತ್ತೆಯನ್ನು ವಿವರಿಸುವ ರೀತಿ.

ಎಪ್ಪತ್ತರ ದಶಕದಲ್ಲಿ ಪಶ್ಚಿಮ ಬಂಗಾಳದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ರೈತ ಕಾರ್ಮಿಕರ ಚಳುವಳಿ ಬಲಿಷ್ಟವಾಗ ತೊಡಗಿತು. 1971ರ ಅಸೆಂಬ್ಲಿ ಚುನಾವಣೆಯಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಸ್ಪಷ್ಟ ಬಹುಮತ ಪಡೆಯುವ ಸಾಧ್ಯತೆಯಿತ್ತು. ಈ ಸಂದರ್ಭದಲ್ಲಿ ಆಪಕ್ಷದ ಮುನ್ನಡೆಯನ್ನು ತಡೆಯಲು ಫಿತೂರಿ ನಡೆಸಲಾಯಿತು. 1971ರ ಫೆಬ್ರುವರಿ 21 ರಂದು ಅಖಿಲ ಭಾರತೀಯ ಫಾರ್ವರ್ಡ್ ಬ್ಲಾಕಿನ ಅಧ್ಯಕ್ಷ ಮತ್ತು ಹಿರಿಯ ರಾಜಕಾಣಿ ಹೇಮಂತ ಕುಮಾರ ಬಸು ಕಲ್ಕತ್ತೆಯಲ್ಲಿ ಕೊಲೆಯಾದರು. ಕೂಡಲೇ ಕೊಲೆಗೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಕಾರಣವೆಂದು ಆರೋಪಿಸಲಾಯಿತು. ಪತ್ರಿಕೆಗಳೂ ಇದನ್ನೇ ಪ್ರಚಾರ ಮಾಡಿದವು. ಪರಿಣಾಮವಾಗಿ ಚುನಾವಣೆಗಳಲ್ಲಿ ಮೂವತ್ತೈದು ಸೀಟು ಗಳಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಎರಡು ಸಹಸ್ರ ಓಟುಗಳ ಅಂತರದಿಂದ ಸೋತು ಹೋಯಿತು. 280 ಸದಸ್ಯರು ಅಸೆಂಬ್ಲಿಯಲ್ಲಿ 127 ಸ್ಥಾನಗಳನ್ನು ಗಳಿಸಿತು ಆದರೆ ಆ ಬಳಿಕದ ವರ್ಷಗಳಲ್ಲಿ ಕಾಂಗ್ರೆಸ್ ಸರ್ಕಾರ ಬಸುರವರ ಕೊಲೆ ಆರೋಪಿಗಳ ವಿರುದ್ಧ ಮೊಕದ್ದಮೆಯನ್ನು ವಾಪಸು ಪಡೆಯಿತು ಮತ್ತು ಕೊಲೆಯ ಕುರಿತು ತನಿಖೆ ನಡೆಸಲೇ ಇಲ್ಲ.

1972ರಲ್ಲಿ ಪಶ್ಚಿಮ ಬಂಗಾಳದಲ್ಲಿ ನಡೆದ ಅಸೆಂಬ್ಲಿ ಚುನಾವಣೆಗಳಲ್ಲಿ ಸಾರ್ವತ್ರಿಕ ಗೂಂಡಾಗಿರಿ, ದಬ್ಬಾಳಿಕೆ, ದೌರ್ಜನ್ಯ ನಡೆಸಲಾಯಿತು. ಈ ಅನ್ಯಾಯದಿಂದ ಕಾಂಗ್ರೆಸ್ ಪಕ್ಷಕ್ಕೆ ಬಹುಮತ ಸಿಕ್ಕಿತು. ಒಂದು ವರ್ಷದ ಹಿಂದೆ 127 ಸಿಕ್ಕಿದ್ದ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷಕ್ಕೆ ಕೇವಲ ಹದಿಮೂರು ಸೀಟು ಸಿಕ್ಕಿತು. 1951 ರಿಂದ 1971ರ ತನಕ ಐದು ಚುನಾವಣೆಯಲ್ಲಿ ನಿರಂತರವಾಗಿದೆ.

ಜಯಗಳಿಸಿದ್ದ, 1971ರಲ್ಲಿ ಅಜಯಮುಖರ್ಜಿಯ ವಿರುದ್ಧ ಹದಿಮೂರು ಸಹಸ್ರ ನೋಟುಗಳಿಂದ ಜಯಗಳಿಸಿದ್ದ ಈಗಿನ ಮುಖ್ಯ ಮಂತ್ರಿ ಜ್ಯೋತಿಬಸು ಓರ್ವ ಅನಾಮಧೇಯ ಕಾಂಗ್ರೆಸ್ ಎದುರಾಳಿಗೆ ಎಪ್ಪತ್ತು ಸಹಸ್ರ ನೋಟುಗಳಿಗೆ "ಸೋತು ಹೋದರು" ಆ ಬಳಿಕ ಕಾಂಗ್ರೆಸ್ ಆಳ್ವಿಕೆಯಲ್ಲಿ ಕೊಲೆಗಳು ಸಾಮಾನ್ಯ ಘಟನೆಗಳಾದವು ಕಲ್ಕತ್ತೆಯ ಮೇಯರ್ ಒಂದು ವರ್ಷಕ್ಕಿಂತ ಹೆಚ್ಚು ತನ್ನ ಮನೆ ಬಿಟ್ಟು ಹೋಗ ಬೇಕಾಯಿತು. 1973ರಲ್ಲಿ ಇಂಥವರ ಸಂಖ್ಯೆ ಇಪ್ಪತ್ತು ಸಹಸ್ರ ವಿಶ್ವವಿದ್ಯಾಲಯಗಳು ಗೂಂಡಾಗಿರಿಯ ಕೇಂದ್ರಗಳಾದವು. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಅಂದಾಜು ಒಂದು ಸಾವಿರ ಕಾರ್ಯಕರ್ತರು ಕೊಲೆಯಾದರು. ಹೀಗೆ ಫ್ಯಾಸಿಸ್ಟ್ ಕ್ರೌರ್ಯದ ಕರಾಳ ಹಸ್ತ ಪಶ್ಚಿಮ ಬಂಗಾಳವನ್ನು ಆವರಿಸಿತು. ಆದರೆ ಈ ದೌರ್ಜನ್ಯ ದಬ್ಬಾಳಿಕೆಯ ಬಗ್ಗೆ ನಮ್ಮ ದೊಡ್ಡ ಪತ್ರಿಕೆಗಳು, ಬಲಪಂಥೀಯ ರಾಜಕೀಯ ಪಕ್ಷಗಳು ಒಳಗೊಳಗೆ ಖುಷಿ ಪಡುತ್ತ ಸುಮ್ಮನಿದ್ದವು. ಆದರೆ 1976ರಲ್ಲಿ ಈ ದಬ್ಬಾಳಿಕೆಯ ಬಿಸಿ ಅವುಗಳನ್ನೂ ಬಿಡಲಿಲ್ಲ.

1974ರಲ್ಲಿ ರೇಲ್ವೆ ಲೋಕೋ ನೌಕರರ ಮುಷ್ಕರವನ್ನು ಸರ್ಕಾರ ಸದೆ ಬಡಿದ ರೀತಿಯನ್ನು ರಮ ಚಕ್ರವರ್ತಿಯ ಕತೆಯ ಮೂಲಕ ಅಶೋಕ ಮಿತ್ರ ಮನೋಜ್ಞವಾಗಿ ಚಿತ್ರಿಸುತ್ತಾರೆ. ಬಂಗ್ಲಾ ದೇಶದ ಗಡಿ ಪ್ರದೇಶದಲ್ಲಿರುವ ಕೌಂಬ್ರೆಪಾರ ಲೋಕೋ ಶೆಡ್ಡಿನಲ್ಲಿ ನೌಕರ ಸುಘಾಂತ್, ಆತನ ಪತ್ನಿ ರಮಾ. ಅವರದ್ದು ಕೆಳ ಮಧ್ಯಮ ವರ್ಗ ಕುಟುಂಬ. ಸುಘಾಂತ ಯಾವ ಯೂನಿಯನ್ನಿಗೂ ಸೇರಿದವನಲ್ಲ. ಆದರೆ 1974ರ ಮೇ ತಿಂಗಳಲ್ಲಿ ನಡೆದ ಮುಷ್ಕರದ ಸಮಯದಲ್ಲಿ ಆತ ತನ್ನ ಕಾಲೊನಿ ಬಿಟ್ಟು ಭೂಗತ ನಾಗುವುದು ಅನಿವಾರ್ಯವಾಗಿತ್ತು. 1974ರ ಮೇ 8 ರಂದು ಬೆಳಿಗ್ಗೆ ಒಮ್ಮಿಂದೊಮ್ಮೆಲೆ ಬಂದ ರಿಸರ್ವ್ ಪೋಲೀಸರ ಪಡೆ ರಮಾ ಮತ್ತು ಆಕೆಯ ಅತ್ತೆಯನ್ನು ಮನೆಯಿಂದ ಹೊರಹಾಕಿ ಮನೆಯ ಸಾಮಾನುಗಳನ್ನು ಬಿಸಾಡಿದರು. ಕಾಲೋನಿಯ ಇತರ ಕುಟುಂಬಗಳಿಗೂ ಇದೇ ಗತಿ ಒದಗಿತು. ರಮಾ ಮತ್ತು ಇತರ ಹೆಂಗಸರಿಗೆ ಪತ್ತಿರದ ಹಳ್ಳಿಯಲ್ಲಿ ಆಶ್ರಯ ಸಿಕ್ಕಿತು. ಕೊನೆಯಲ್ಲಿ ಮುಷ್ಕರ ವಿಫಲವಾಯಿತು. ಸುಘಾಂತನನ್ನು ಕೆಲಸ ದಿಂದ ವಜಾ ಮಾಡಿದರು. ಕೆಲವು ತಿಂಗಳುಗಳ ಬಳಿಕ ರಮಾನ ಅತ್ತೆ ಆಸ್ಪತ್ರೆಯಲ್ಲಿ ಸತ್ತು ಹೋದರು. ಒಂಬತ್ತು ತಿಂಗಳ ನಿರುದ್ಯೋಗದ ಬಳಿಕ 1977ರಲ್ಲಿ ಸುಘಾಂತನಿಗೆ ಜಾಧನಪುರದ ಇಂಕ್ ಕಾರ್ಖಾನೆಯಲಿ ಕೆಲಸ ಸಿಕ್ಕಿತು, ಅವನ ಕುಟುಂಬ ಸ್ಲಮ್ಮಿನಲ್ಲಿ ವಾಸಿಸ ತೊಡಗಿತು. ಆದರೆ ರಮಾ ತನಗಾದ ಅನ್ಯಾಯ ಸೇಡು ತೀರಿಸಿ ಕೊಂಡಳು. 1977ರಲ್ಲಿ ಚುನಾವಣೆಯ ದಿನ ಬೆಳಿಗ್ಗೆ ಬೇಗ ಎದ್ದು ತನ್ನ ಗಂಡನನ್ನು ಹೊರಡಿಸಿ ಜುಬು ಕೊಟ್ಟು ಬಂದಳು. ಇಂತಹ ಸಹಸ್ರ ಸಹಸ್ರ ರಮಾರ ಓಟುಗಳಿಂದ ಇಂದಿರಾ ಗಾಂಧಿಯ ಆಳ್ವಿಕೆ ಕೊನೆಗೊಂಡಿತ್ತು. ಪಶ್ಚಿಮ ಬಂಗಾಳದಲ್ಲಿ ಎಡ ಪಕ್ಷಗಳ ಸರ್ಕಾರ ಅಧಿಕಾರಕ್ಕೆ ಬಂದಿತು. ಅಶೋಕ ಮಿತ್ರ ಈ ಪುಸ್ತಕವನ್ನು ರಮಾ ಚಕ್ರವರ್ತಿಗೆ ಮತ್ತು ಅಂಥ ರಮಾ ಚಕ್ರವರ್ತಿಗಳಿಗೆ ಅರ್ಪಿಸಿದ್ದಾರೆ.

1980 ರಲ್ಲಿ ಮತ್ತೆ ಈಗ ಮ್ಯಾಡಮ್ ಪ್ರಧಾನಮಂತ್ರಿ ಆಳ್ವಿಕೆ ನಡೆಸುತ್ತಾರೆ. ಆದರೆ ರಮಾ ಚಕ್ರವರ್ತಿಯ ನಾಡಿನಲ್ಲಿ ಮಾತ್ರ ಇಂದಿರಾ ಗಾಂಧಿಗೆ ಸೋಲಾಯಿತು.

ಚಿರತೆಯ ಚಿಕ್ಕೆಗಳು ಬದಲಾಗುವುದಿಲ್ಲ. ಪೊರೆ ಕಳಚಿದರೂ ಸರ್ಪದ ವಿಷದ ಹಲ್ಲುಗಳು ಹರಿತವಾಗಿರುತ್ತದೆ. ಆದುದರಿಂದ ಮ್ಯಾಡಮ್ ಪ್ರಧಾನ ಮಂತ್ರಿ ಮತ್ತು ಆಕೆಯ ಮಗನ ಕಾರ್ಯ ವಿಧಾನದ ಬಗ್ಗೆ ಅತ್ಯಂತ ಎಚ್ಚರ ವಹಿಸುವುದು ಅಗತ್ಯ.

●

# ನಾಯಕನೊಬ್ಬನ ರಾಜೀನಾಮೆ

ಪ್ರೇಮದ ಗಂಡಸೊಬ್ಬ ಕೊಂಚ ಸಿದ್ಧಾಂತಕ್ಕಾಗಿ
ಕೈಲಾದ ಯತ್ನ ಮಾಡಿದ.
ಸುಖಿಸುವ ಪ್ರಾಣಿ ಒಂದಿಷ್ಟು ನೀತಿಯನ್ನು
ಬಯಸುವ ಹಾಗೆ ;
ಅಥವಾ ಬೆದೆಯೆದ್ದ ಹೋರಿ ಒಡೆಯನಿಗಾಗಿ
ಕೆಲ ನಿಮಿಷ ನೇಗಿಲು ಎಳೆದ ಹಾಗೆ,
ಅಥವಾ ಕಸ್ತೂರಬಾ'ಗೆ ಸಂಭೋಗದ
ಕನಸು ಬಿದ್ದ ಹಾಗೆ.

ತತ್ವದ ಗಂಧವೇ ಇಲ್ಲದ ಈ ಜಾಗದಲ್ಲಿ ಇವನ
ಎಡ ಹಣೆಗೆ ಕುಂಕುಮ ಹಚ್ಚಿದ್ದು
ಇವನೇ ಇಲ್ಲಿದ್ದು ರಾಜಸೂಯ ಯಾಗ ಮಾಡಲು
ಈ ನೆಲದ ಉದ್ದಗಲಕ್ಕೆ ಓಡಾಡಿದ್ದು
ಈತನ ಸೂತ್ರಕ್ಕೆ ಹಿಂದೆ ನಿಂತು ಪಂಚಾಂಗಿಗಳು
ಚಕ್ಕಂದ ಹೊಡೆದದ್ದು - ಇಷ್ಟೆಲ್ಲ
ನಂಬೂದ್ರಿಗಳಿಗೆ ಕೂಡ ಅಷ್ಟು ತಪ್ಪಾಗಿ ಕಂಡ
ದಾಖಲೆ ಎಲ್ಲೂ ಇಲ್ಲ.

ಖಾಲಿ ಅಂಬಲಿ ಚಿಪ್ಪಿನ ಎದುರು ಕೂತ ಮಗುವಿಗೆ
ಅಂಬಲಿ ಸುರಿವವನ ಬಾಯಿಯ
ಸ್ಕಾಚ್ ನಾತ ಅಷ್ಟೇನೂ ಕೆಟ್ಟದಾಗಿ ಅನ್ನಿಸಲಿಲ್ಲ—
ಯಾಕೆಂದರೆ ವಾಸನೆಯ ಪರಂಪರಾಗತ ತತ್ವಕ್ಕೇ
ಹೊರತಾದ ಮಗು
ಕಡೆಗೂ ಒಂದು ನಾತ ಕಾಣತೊಡಗಿತ್ತು.

ದೊರಗಳ ಹೊಕ್ಕುಳದ ಸಂಗಡ ನೇರ ತಗುಲಿಕೊಂಡ
ಬೆವರು ಕಪ್ಪು ನಿಟ್ಟುಸಿರ ನಿರುಮ್ಮಳದ
ಅರೆಸೊನ್ನೆಯ ರೂಹಿನ ನಮ್ಮ ಎಲುಬಿನ ಯೆಂಕ
ಕೊಂಚ ತಲೆಯೆತ್ತಿ ಉಮ್ಮಳದ ಜೀವ ಪಡೆಯಬಹುದು
ಎಂದು ಅಂದುಕೊಳ್ಳುವಲ್ಲಿ

ತನ್ನ ಸ್ನ್ಯಾಚ್ ಸಿದ್ಧಾಂತ ಕನಸು ರಸಿಕತೆ
ಕೋಳಿ ಕೈಬಳೆ ಸಂಗೀತ ಬಂಡಾಯ ಬೇಗುದಿಯ
ಪೈಪಿನ ದಪ್ಪನೆಯ ಆಸಾಮಿ
ತನ್ನ ವಿಚಿತ್ರ ವಾತಾವರಣ ಕಟ್ಟಿಕೊಂಡೇ
ಭ್ರಮೆಗಳಿಂದ ಬೆತ್ತಲೆ ಮಾಡಿಸಿಕೊಂಡವನಂತೆ

ದೂರ ದೂರಕ್ಕೆ ಹೊರಟು ಹೋದ.

—ಪಿ. ಲಂಕೇಶ್

## ನೆಲ ಸೆಳೆತ

ಬಾ ಎಂದು ಕರೆದ ಹಕ್ಕಿ ಹಾರಿ ಹೋಯಿತು ಗೆಳತಿ
ವರ್ಷಗಳ ಜೊತೆಗೆ
ಸಿಮೆಂಟು ಕಟ್ಟಡಗಳೆತ್ತರದ ಪೈಪೋಟಿ ಸ್ಪರ್ಧೆ

ಎಲ್ಲಿ ಹೋದವು ಎಂದು
ಮಾರುಕಟ್ಟೆಗೆ ಬಂದ ಗೊಡೆ ಹೂಗಳ ಕೇಳಿ
ಪಡೆದ ಉತ್ತರ ; ಕೆಜಿ ಗಿಪ್ಪು ಬೆಲೆ !

ನಿನ್ನ ಕಣ್ಣಿನ ಮುಂದ ಹೊಳೆ ಬಂದ
ಹೊರಜಗಿದೀಗ
ಕೂತು ಕೊಂಡಿವೆ ನಿನ್ನ ಮುಂಗೈಯ ಮೇಲೆ
ವರ್ಷಗಳು ಬೆಳೆಸಿರುವ ಕನ್ನಗಳ ಬರಟು ಗಟ್ಟ ಕೊರಲೆ ಅದಕೆ

ಎದೆ ಬಿಟ್ಟು ನೆಗೆದು ಬಾಯಲ್ಲಿ ಬಂದು ಕೂತಿರುವ
ಹೃದಯ ತೋರಲೆ ಅನಕೆ ! ಅದನು ಕೆದಕೇ ಗೆಳತಿ.
ಹಕ್ಕಿಯಾಗಲಿ ಹೃದಯ ಜೆಟ್ ವಿಮಾನ
ರಾಕೆಟ್ಟು ವ್ಯೋಮನ ಕೈಗಳಾಗಿ ಕರೆದೊಯ್ಯು ನಮ್ಮ
ಶುಕ್ರಗ್ರಹ ಕಕ್ಷೆಯಲಿ ತೇಲಿ ಬಿಡಲಿ

೨

ಆ ಹೂವ ತಿಂಗಳಲಿ ಈ ಹಕ್ಕಿ ಸುಳಿವಿಲ್ಲ
ಭೂಕಂಪ ಮಾಪಕಗಳು ಮಲಗಿ ಕೊಂಡಿದ್ದಾಗ ನೆಲ ನನ್ನ
ಬಿಡಲಿಲ್ಲ
ಹಿಂಬಾಲಿಸಿದವು ಒಂಟಿರೋಡಿನ ಲೈಟು ಕಂಬಗಳು ನನ್ನ
ಹೆಸರನ್ನು ಹಿಡಿದು ಕೂಗದಿದ್ದರು ಬಂದಿರುವೆ ಈಗ
ತೋಟಗಳ ಹಸಿರು ಕೆಂಪು ಚೆಲ್ಲುವ ಜಾಗ
ಚೆಂಡು ಹೂಗಳು ಕರುಳ ದಂಡೆಯಾಗುವ ಗಳಿಗೆ

ಅರಬ್ಬಿಕಡಲನು ಕಡೆದ ಚಂಡಮಾರುತ ಛಡಿಗೆ
ನಾಡ ಪಶ್ಚಿಮ ಪಾರ್ಶ್ವ ತತ್ತರಸಿದೆ,
ಪೂರ್ವ ಪರ್ವತದಲ್ಲಿ ಗುಂಡುಗಳ ಮಳೆಧಾರೆ,
ಹಣದ ಕಡಾಯಿ ಕುದಿಕುದಿದು ಉಕ್ಕಿ
ಬಿದ್ದು ಅಂಗೈ ಮೇಲೆ—ಇಗೋ !-ಬೊಬ್ಬೆ

ನೀ ಬಳಿವ ಎಣ್ಣೆ ಉಪಶಮ ನವಿರ ಬಹುದು;
ಕಾನ್ಸರಿನ ಸೆಲ್ಲು ಮೆದುಳೆಲ್ಲ ಮುಲುಗುಟ್ಟಿವೆ.

೩

ನನ್ನ ಡೈರಿಯ ಅಂಕಿ ವಂಕಿ
ಬೇಡಿಯಾಗಿದೆ ಈಗ ನನ್ನ ಕೈಗೆ
ಕಬ್ಬಿಣಭಾರ ಬೇಡಿಗಳನ್ನು ಚಿಗುರು ಬೆರಳಿಂದ
ಪಿಂಗಾಣಿ ಹಲ್ಲುಗಳಿಂದ
ಕಿತ್ತು ಬಿಸುಡುವ ತುರಿತ ಏಕೆ ನಿನಗೊ

ಸಕ್ಕರೆಯ ಇರುವೆಗಳು ರುದ್ರರಾಗುವ
ನರಿ ತೋಳ ಹಾವುಗಳು ಹೆಚ್ಚಿ ಮೆರೆಯುವ
ಊರಾಚೆಗೆ
ಕಬ್ಬಿಣವ ಅಗೆದವನು ಬಿಚ್ಚಿರುವನು

ಅವನ ಸಂಗಾತಿಗಳು ಮಣ್ಣನು ಹೊಕ್ಕವರು
ಬೇರುಗಳ ಭಾಷೆ ಒಗರನ್ನು ಬಡೆದವರು
ತಲೆಮರಸಿ ಇರುಳರಸಿ ಮನೆಯಲ್ಲಿ

ಅವರೆದ್ದು ನಿಂತು ನಿಂತ ನೆಲವನ್ನೊದ್ದು
ಇತ್ತ ಸ್ವರೂಪವಗೆಗೆ
ನೆರಿ ತೋಳ ಹಾವುಗಳ ಕಡಲಿಗಟ್ಟುವವರೆಗೆ
ಹೀಗೆಯೇ ಈ ಬೇಡಿ

೪

ಬೆರಳಿನ ಹಕ್ಕಿ ಬಾಯಿಗೆ ಕೊಡು ಗುಕ್ಕು
ಪುಕ್ಕಗಳ ನೇವರಿಸಿ, ನೆಲದ ಸೆಳೆತವು ಈಗ
ಬರಸೆಳೆಯುತಿದೆ ನನ್ನ

ನಿನಗು ಹಾಗೆಯಿ ಗೆಳತಿ ?

—ಶಿವಪ್ರಕಾಶ

ಸಾದರ ಸ್ವೀಕಾರ :-

| | |
|---|---|
| **ಅಂತರ್ಯ** (ಎರಡನೆಯ ಮುದ್ರಣ ವಿಮರ್ಶಾ ಲೇಖನಗಳು) **ಕೆ. ಎಸ್. ಭಗವಾನ್** ಮಹಿಮ ಪ್ರಕಾಶನ, 387. 14ನೇ ಮೇಯಿನ್, ಸರಸ್ವತಿ ಪುರಂ, ಮೈಸೂರು-9 ಬೆಲೆ : **ಒಂಬತ್ತು ರೂಪಾಯಿಗಳು** | **ಶಂ. ಬಾ : ಅಧ್ಯಯನ** **ಮಲ್ಲೇಪುರಂ, ಜಿ. ವೆಂಕಟೇಶ್** ಸಂಸ್ಕೃತಿ ವಿಕಾಸ ಮಾಲೆ, ನಂ. ಯು-155 ಎನ್. ಹಿ. ಬ್ಲಾಕ್, 6ನೇ ಕ್ರಾಸ್ ಶ್ರೀರಾಮಪುರಂ, ಬೆಂಗಳೂರು–21 ಬೆಲೆ : **ಆರು ರೂಪಾಯಿಗಳು** |
| **ನೆಲೆ-ಕಾದಂಬರಿ** **ಜಾಣಗೆರೆ, ವೆಂಕಟರಾಮಯ್ಯ** ಮಿತ್ರ ಪ್ರಕಟನಾಲಯ, ನಂ. 3905 ಮೊದಲನೆ ಮುಖ್ಯ ರಸ್ತೆ, ಗಾಯತ್ರಿನಗರ ಬೆಂಳೂರು–21 ಬೆಲೆ : **ಐದು ರೂಪಾಯಿಗಳು** | **ಕಪಲೊಡೆಯುವೀ ಬದುಕು** **(ಕವನ ಸಂಕಲನ)** **ದಿವಾಕರ ರಾವ್ ನಾಡಿಗರ್** ಗೀತಾ ಪ್ರಕಾಶನ, 3ನೇ ಬ್ಲಾಕ್ ರಾಜಾಜಿನಗರ, ಬೆಂಗಳೂರು-10 ಬೆಲೆ : **ಐದು ರೂಪಾಯಿಗಳು** |

# ಮೂರು ಪುಸ್ತಕಗಳ....ವಿಮರ್ಶೆ

ನೀರಾಗ ಕುಂತೇನ ನೆನಕೊಂತ: **ಧರಣೇಂದ್ರ ಕುರಕುರಿ**
**ಆಲೋಚನ ಪ್ರಕಾಶನ, ಗದಗ**
ಪುಟ: 58, ಬೆಲೆ: ಮೂರು ರೂ.

ಕಮಿಟೆಡ್ ಕವಿತೆಗಳು: **ಬಿ. ಎಂ. ರವೇಶ್**
**ಪ್ರಕಾಶನ: ಪರಿಸರಸಾಹಿತ್ಯ**
ಮಿಲ್ ರೋಡ್, ಗುಲ್ಬರ್ಗ, ಪುಟ: 32. ಬೆಲೆ ನಾಲ್ಕು ರೂ

ಬದುಕು ಬರಹಗಳ ನಡುವೆ: **ಸಂಪಾದಿತ**
**ಶ್ರಮಿಕ ಪ್ರಕಾಶನ, ಹುಬ್ಬಳ್ಳಿ**
ಪುಟ; 68, ಬೆಲೆ: ಆರು ರೂ

ಧರಣೇಂದ್ರ ಕುರಕುರಿಯವರ ಕವನಗಳು ಓದಿಸಿಕೊಳ್ಳುವ ಗುಣ ಹೊಂದಿದ್ದರೆ ಅದಕ್ಕೆ ಕಾರಣ ಅವರ ಲಿರಿಕಲ್ ಆದ ಭಾಷೆ. ನಿಜಕ್ಕೂ ಆಡುಭಾಷೆಯನ್ನು ಅವರು ತುಂಬಾ ಚೆನ್ನಾಗಿ ಬಳಸಬಲ್ಲರು. ಕುರಕುರಿಯವರು ಭಾಷೆಯ ದೃಷ್ಟಿಯಿಂದ ಭರವಸೆಯ ಕವಿಯಾಗಿ ಕಂಡರೂ, ತಮ್ಮ ಮೊದಲ ಸಂಕಲನಕ್ಕಿಂತ ಬೆಳೆದಂತೆ ಕಂಡುಬಂದರೂ ಪ್ರಸ್ತುತ ಸಂಕಲನ ವೈಯಕ್ತಿಕ ನೆಲೆಗಟ್ಟನ್ನೆ ಪಾತಾಳಿಯಾಗಿರಿಸಿಕೊಂಡಿರುವುದರಿಂದ ಸೀಮಿತ ಆಶಯದ್ದು ಆಗುತ್ತದೆ. ಅವರ ಅನುಭವಿಸುವಿಕೆಯ ಹರಹು ಹೆಚ್ಚಾದಾಗ ನೀರಾಗ ನೆನಕೊಂತ ಕುಂತುದು ತನ್ನ ಎಲ್ಲ ಎಚ್ಚರದಲ್ಲಿ ಸಶ್ಯವಾದಾಗ ನಿಜಕ್ಕೂ ಸವಾಲನ್ನು ಎದುರಿಸಬೇಕಾಗುತ್ತದೆ. ಕುರಕುರಿಯವರು ತಮ್ಮ ಅಂತರ್ಮುಖತೆಯ ಪೊರೆಯನ್ನು ಬಿಚ್ಚಿಕೊಂಡು ಹೊರಬಂದಾಗ ಅಂದರೆ ಪರಿಸರಕ್ಕೆ ಸ್ಪಂದಿಸಿದಾಗ ಸೋಲುವುದು ನನ್ನ ಮಾತಿಗೆ ಸಮರ್ಥನೆಯಾಗುತ್ತದೆ. 'ಬಸವಣ್ಣ -ನಾವು' 'ಸಮಾಜವಾದಿ', 'ನಡುವೆ ನಾನು' ಪ್ರಗತಿ ಕವನಗಳು ಒಂದು ಬಗೆಯ ಲಕ್ಷುರಿಯಾಗಿ ಕಾಣುತ್ತವೆ.

**ಕಂಬಾರನ ಕೈಯಾಗ ಕಡತಾ**
**ಕಿಂದು**

ಕುಡುಗೋಲಾದರೆ ಹುಲ್ಲು
ಕೋದೇನು
ಕುಡ ಆದರ
ಹಕ್ಕಲ ಹರಗೇನು
ಉಳಿದೇನು ಬೆಳದೇನು

ಇದು ಕವಿಯ ಆಶಯವಾಗಿದೆ; ಅದೇ ಗುರಿಯಾದಾಗ ನೋಡಬೇಕು. ಸಂಕಲನದಲ್ಲಿ ಎದ್ದು ಕಾಣುವ ಕವನಗಳೆಂದರೆ 'ನಂಟು', 'ನೀ.' 'ಕಚ್ಚ' (ಗುರುತು) 'ಹೆಣ್ಣು' 'ಬದುಕು' ಕವನ ಧರಣೇಂದ್ರ ಅವರು ಸಮರ್ಥ ಕವಿ ಎಂಬುದನ್ನು ತೋರಿಸಿಕೊಡುವ ಕವನ. ಅದರ ಲೈಂಗಿಕ ಆಶಯ ಎಲ್ಲಾ ಚಪಲತೆಗೆ ಇಳಿಯದೆ ಇರುವುದು ಕವಿ ಬೆಳೆಯುತ್ತಿರುವುದಕ್ಕೆ ಸಾಕ್ಷಿ.

ಚುಕ್ಕಿ, ಚಂದ್ರ, ಸೂರ್ಯ
ಎಲ್ಲಾರನೂ ಹಿಡದು ಕವಿತಾದೊಳಗೆ
ತುರುಕಿದರೇನಾಗುತ್ಯತಿ
ಎಲ್ಲಾ ತಾರೆಗಳನ್ನ ಕಿತ್ತ ತಂದು"

ಇಲ್ಲ—

ಕಗ್ರಾಸ ದಲಿತರ ಗುಡಸಲದೊಳಗೆ
ಎಣ್ಣಿ ಇಲ್ಲದ ಪಣತಿಯೊಳಗೆ
ಒಯ್ದು ಇಟ್ಟು ಬೆಳಕ ಮಾಡಲ್ಯಾ?

ಇಲ್ಲಿ ಕವಿ ಕೊಡುವ ಪ್ರಾಶಸ್ತ್ಯವೇ ಅವರ ಮುಂದಿನ ಮಾತುಗಳ ಅಪ್ರಮಾಣಿಕತೆಯನ್ನು ಹೇಳುತ್ತದೆ.

ತಮ್ಮ ಮಾಧ್ಯಮದ ಸಫಲತೆಯನ್ನು ಇಲ್ಲಿ ತೋರಿಸಿದ ಕವಿ ಅದರ ಎಲ್ಲ ಸಾಧ್ಯತೆಗಳನ್ನು ತೋರಿಸಿಕೊಡಬೇಕಾಗಿರುವ ಸಂದರ್ಭದಲ್ಲಿ ದೊಳ್ಳು ಮಾತುಗಳ ಹಿನ್ನುಡಿ ಅಪಮುಕಾರಿಯಾಗಿ ಕಾಣುತ್ತದೆ.

ಧರಣೇಂದ್ರ ಕುರಕುರಿಯವರಿಗೆ ಮೇಲೆ ಕೊಟ್ಟ ಪಾಠ ಮುಖ್ಯವಾದರೆ ರಮೇಶ್ ಅವರಿಗೆ ಸಫಲವಾಗದ ಪ್ರೀತಿ ನನಸಾಗದ ಕನಸುಗಳೇ ಮುಖ್ಯವಾಗಿ ಅವರನ್ನು ಕಾಮ್ಯ ಸೊರಗಿ ಬಿಟ್ಟಿದೆ. ಈ ಸಂಕಲನ ಒಂದು ಬಗೆಯ ನಾರ್ಸಿಸಸ್ ಗುಣ, ಆತ್ಮಮರುಕ, ತಿರಸ್ಕಾರ, ಧಿಕ್ಕಾರ ದಿಂದ ಕೂಡಿದೆ.

ಬದುಕಿನಕ್ಕರಿಗಳು ಸಿಟ್ಟುಸಿರಾಗುವ
ಕೀಟೆಗೆ ಹೇಳಬೇಕು ಜೈ ಜೈ!

ಎಂದು ತನ್ನೆಲ್ಲ ಕೋಟಲೆ, ನೋವುಗಳ ನಡುವೆಯೂ ನಿರ್ಲಿಪ್ತತೆಯನ್ನು ಸಾಧಿಸಲು

ಹೊರಟು ಮತ್ತೆ ಆದರಲ್ಲೇ ಮುಗುಚಿಕೊಂಡು ಬೀಳುವುದು(ನಿರ್ಲಿಪ್ತ) ದೊಡ್ಡ ಮಿತಿಯಾಗಿ ಬಿಡುತ್ತದೆ.

ಕವಿ ತನ್ನ ತೀವ್ರವಾದ ಅನುಭವಗಳಿಗೆ ಮೊದಲ ಸಂಕಲನದಲ್ಲಿ ಅಭಿವ್ಯಕ್ತಿ ಕೊಡುವುದು ಸಹಜವೇನೋ; ಬದುಕಿನ ದ್ವಂದ್ವಗಳು, ಅಸಹಾಯಕತೆಗಳು ಅವನ ಆಶೆಯನ್ನು ಮೀರಿ ನಿಂತಾಗ ತನ್ನ ಕನಸು ನನಸಾಗದ ಚಡಪಡಿಕೆಯಲ್ಲಿ, ನಿರಾಶೆಯಲ್ಲಿ ವಿಹ್ವಲತೆಯಲ್ಲಿ ಆತ ತಡವರಿಸ್ಸು ಚಿತ್ರ ಇಲ್ಲಿದೆ. ಆದರೆ ಅದೇ ಮುಖ್ಯವಾದುದು ದುರಂತ ವಾಗುತ್ತದೆ. 'ಪರ್ವನೀತಿ' ಯಲ್ಲಿಯೇ ತನ್ನ ಎಲ್ಲ ಅಳಲನ್ನು ತೋಡಿಕೊಳ್ಳುವ ನಾಯಕ ತೀವ್ರ ನಿರಾಶವಾದಿಯಾಗಿ ಕಾಣುತ್ತಾನೆ.

ಭೂಮಿಯಂಚಿನ ಆ ಅಪ್ಪಟ ಮೌನದ
ಮಂಜಿನ ಕಂಡಕಗಳಲ್ಲಿ ಹೆಪ್ಪುಗಟ್ಟಿ ದಿಕ್ಕಿರದೆ
ಬಿದ್ದ ಅತೃಪ್ತಿ, ಕನಸುಗಳು, ಕೊನೆಗೂ ಕೊನಲೆಸಿಯಾವೇ
ಬೇರೂ ಸಹ ಕೊಳೆತು ಕುಸಿಯುತ್ತಿರುವ ಬದುಕ ?

ಆದರೆ ಒಂದು ವಿಚಿತ್ರ ಎಂದರೆ ಇಡೀ ಸಂಕಲನದ ಸ್ಥಾಯಿಯಾಗಿರುವ ನೋವಿಗೆ ಮೂಲ ನೆಲೆಯಾಗಿರಬಹುದು 'ಜೀವನವೇ ಸಮರ್ಥವಾಗಿ ಮೂಡಿಬಂದಿರದಿರುವುದು!

ಸಹಿಸಬೇಕು ಮಗನೆ,
ಬದುಕು ನಡು ಹಗಲಲ್ಲಿ
ಧೂತವಾಗುತಿವೆ ವಿಸ್ಮಯಕ್ಕೆ

ಇಲ್ಲಿಗೆ ಬಂದು ನಿಂತಿರುವ ಕವಿಯಿಂದ ಅನುಭವಿಸುವಿಕೆ ಹೆಚ್ಚಾದಂತೆ, ಚಿಂತನೆ ಹರಳು ಗಟ್ಟಿದಂತೆ ಹೆಚ್ಚಿನದನ್ನು ನಿರೀಕ್ಷಿಸಬೇಕಾಗಿದೆ. ರಮೇಶ್ ಅವರಿಗೆ ಈ ಮಾಧ್ಯಮ ದಕ್ಕಿರುವುದು ಒಂದು ವಿಶೇಷ ಸಂಗತಿ.

ಮುದ್ರಣ ದೋಷ ಒಂದೂ ಇಲ್ಲದ ಅಚ್ಚುಕಟ್ಟಾದ ಸುಂದರ ಸಂಕಲನ ಇದು.

ಟೆಲಿಫೋನ್ ಆಪರೇಟರುಗಳು ರಚಿಸಿದ ಕವನ(?)ಗಳ ಸಂಕಲನ ಇದು. ಸಂಪಾದಕರು "ಯಾಂತ್ರಿಕ ಬದುಕಿನಿಂದ ದೂರ ಸರಿದು ಸಾಹಿತಿಗೆ ಚಟುವಟಿಕೆಯ ಅಭಾವವನ್ನು ನೀಗಿಸಲು" ಈ ಪ್ರಯತ್ನ ಮಾಡಿಕೊಂಡಿದ್ದಾಗಿ ಹೇಳಿದ್ದಾರೆ. ಯಾಂತ್ರಿಕ ಬದುಕಿನಿಂದ ಹೊರಬರಬೇಕೆಂದೇ ಇಲ್ಲಿ ಕವನ ಬರೆದವರು ಹೆಚ್ಚು ಜನ, ಅನಿಸಿದ್ದನ್ನೆಲ್ಲ ಬರೆಯುವ ಹವ್ಯಾಸಕ್ಕೆ ಅಥವ ಗದ್ಯವಾದುದನ್ನು ಪದ್ಯದ ರೂಪದಲ್ಲಿಟ್ಟರೆ ಸಾಕು ಕವಿಯೆನಿಸುತ್ತಾನೆ ಎಂದು ತಿಳಿದುಕೊಂಡವರ ಪ್ರಾತಿನಿಧಿಕ ಸಂಕಲನ ಇದು. ಅನುಭವ ಅಭಿವ್ಯಕ್ತಿಗೊಳ್ಳುವ ಕ್ರಿಯೆ ಎಷ್ಟು ಗಂಭೀರವಾಗಿರಬೇಕು ಮತ್ತು ಜವಾಬ್ದಾರಿಯುತವಾಗಿರಬೇಕು ಎಂಬುದು ಇಲ್ಲಿನ ಕವಿಗಳಿಗೆ ಗೊತ್ತಿದ್ದಂತಿಲ್ಲ.

೧) ದಿಕ್ಕು ತೋರಿಸುವವಗೆ ದಿಕ್ಕು ತಪ್ಪಿದರೆ
ದಿಕ್ಕು ಕಾಣುವುದೆಂತು ?

— ಗುರುನಾಥ ಮಹಾಶಬ್ದೆ

೨) ಹೊಸ್ಸ ಸೂರ್ಯನ ದಿವ್ಯ ದರುಶನವೆ ಅಭ್ಯುದಯ
ಏಕ ಚಿತ್ತದ ಯಾತ್ರೆ ಹಗಲು ರಾತ್ರಿ
ಪ್ರಗತಿ ಪುರುಷನ ರಥವ ಸುಗತಿಯುಲಿ ಸಾಗಿಸುವ

— ಎಸ್. ಎಸ್. ಪೂಜಾರ

೩) ಕರ್ಮ ಹೆಚ್ಚಾಗೇತಿ ಪಾಪ ಬಾಳಾಗೇತಿ
ಮಳೆ ಬಾ ಅಂದರ ಹ್ಯಾಂಗ ಬರತೈತಿ
ಬಿಳಿ ಹೆಣಾ ಹುಗದಿರಬೇಕ
ದುರಗವ್ವನ ವಾರಾ ಬರಾಬರಿ ಮಾಡಿರಾಕಿಲ್ಲಾ

—ಶಿವಲಿಂಗಯ್ಯ, ಹಿರೇಮಠ

ಇವು ಸಂಪಾದಕರ ಕವನಗಳು ! ಈ ಸಂಕಲನದ ಮಟ್ಟವನ್ನು ದೃಷ್ಟಿಯಲ್ಲಿಟ್ಟು ಕೊಂಡರೆ ಪುಷ್ಪಾಕುಲಕರ್ಣಿಯವರ 'ಹೆಸರಿಡಲಾಗದ ಹಾಡು' ಉತ್ತಮ ವಾಗಿದೆ ಎನ್ನಬೇಕು.

—ಪದ್ಮರಾಜ ದಂಡಾವತಿ

---

## ಆಕ್ರಮಣ : ಪ್ರೀತಿ-ಪ್ರೇಮ-ನೆನಪು ಇತ್ಯಾದಿ....

—ಶೂದ್ರ ಶ್ರೀನಿವಾಸ್

---

'ಪ್ರೀತಿಸುವುದಕ್ಕೂ ಧೈರ್ಯ ಬೇಕು'—ಈ ಧೈರ್ಯ ಮತ್ತು ಭಯದ ನಡುವೆ ಒಂದು ಕಾಲದ ತುಡಿತವನ್ನು ಪ್ರೇಮ ಕಾಮಗಳಲ್ಲಿ ಸರಳೀಕರಿಸಿ ಹೇಳಿಬಿಡುವುದು ಸಾಧ್ಯವಾಗಬಹುದು. ಆದರೆ ಎಲ್ಲ ಸಾಧ್ಯತೆಗಳಂತೆ ಇದರಲ್ಲಿ ಪ್ರಾಮಾಣಿಕ ಕುತೂಹಲ ಬೆಳಸಿಕೊಂಡು ಬದುಕಬಲ್ಲ ಜೀವಿಗಳಲ್ಲಿ ಒಂದು ರೀತಿಯ ಅರ್ಥವಂತಿಕೆಯುನ್ನು ಕಂಡುಕೊಳ್ಳುತ್ತಿರುತ್ತಾರೆ ಅನ್ನಿಸುತ್ತೆ. ಇಂಥ ಅನ್ನಿಸುವಿಕೆಯಲ್ಲಿ ಸಾಗುವ 'ಆಕ್ರಮಣ'ದ ಗೆಳೆಯರು ಸೋಲು-ಗೆಲುವುಗಳಲ್ಲಿ ನಡೆಸುವ ಘರ್ಷಣೆಯನ್ನು ಕಾಣಬಹುದು.

ಇದರ ನಡುವೆ ಬಂದು ಹೋಗುವ ಬೇರುಬಿಟ್ಟ ಸಣ್ಣತನಗಳು ಯುವ ಜನಾಂಗದ ಮನಸ್ಸನ್ನು ಘಾಸಿಗೊಳಿಸುತ್ತವೆ. ಇಂಥ ಘರ್ಷಣೆಗಳ ಮೊತ್ತವನ್ನು ಒಬ್ಬ ಕಲಾವಿದ ನಾದಪನು ಸಮರ್ಪಕವಾಗಿ ಹಿಡಿದಿಡುವ ಕಾರ್ಯ ಕಷ್ಟದ ಕೆಲಸವಾಗಬಹುದು. ಆದರೆ ಗಿರೀಶ್‌ಕಾಸರವಳ್ಳಿಯವರು ಅಂಥ ಸಾಧ್ಯತೆಯನ್ನು [illegible] ಪರದೆಗೆ ಹಿಡಿದಿಟ್ಟಿದ್ದಾರೆ. ವೈಕುಂಠರಾಜುರವರ ಕಾದಂಬರಿಯನ್ನು ಓದುವಾಗ ಅಲ್ಲಿಯ ಹುಡುಗರ 'ಆತ್ಮೀಯ' ತುಂಟಾಟಗಳು ಒಂದು ಹಂತದಲ್ಲಿ ಸೆರೆಹಿಡಿದರೆ, ಅದೇ ಹಂತಗಳನ್ನು ವಿಸ್ತರಿಸಿಕೊಂಡು ಚಿತ್ರ ಪ್ರೇಕ್ಷಕರ ಮನಸ್ಸನ್ನು ಸೆಳೆದುಕೊಳ್ಳುತ್ತೆ. ಇದಕ್ಕೆ ಮುಖ್ಯವಾಗಿ, ಚಿತ್ರೋದ್ಯಮಕ್ಕೆ ಇರುವ ಹೆಚ್ಚಿನ ಆಯಾಮಗಳು ಕಾರಣವಿರಬಹುದು.

ಇಲ್ಲಿ ಬರುವ ರವಿ, ಮಾಧು, ಸೋಮು ಮತ್ತು ಲಕ್ಷ್ಮಿ ಹಾಗೂ ನಂದಿನಿ ಸಮಾಜಕ್ಕೆ ಅಪರಿಚಿತರಲ್ಲ. ಎಲ್ಲರ ನಡಾವಳಿಯೂ ಒಂದೇ ರೀತಿಯದಾಗಿರುವುದಿಲ್ಲವೆಂದು ಒಪ್ಪಿಕೊಂಡು ಮುಂದೆ ಸಾಗಿದಾಗ;ಅಂಥವರ ಬದುಕು ವಿಚಿತ್ರ ರೀತಿಯದಾಗಿರಬಹುದು. ಈ ದೃಷ್ಟಿಯಿಂದ ರವಿಯದೆ ಆಗಿರಲಿ, ಲಕ್ಷ್ಮಿಯದೆ ಆಗಿರಲಿ ಮೇಲ್ನೋಟಕ್ಕೆ ವಿಚಿತ್ರ ವಾಗಿ ಕಂಡುಬಂದರೂ ಆ ರೀತಿಯ ಸಾಮಾಜಿಕ ಪರಿಸರದಲ್ಲಿ ನಾವೆಲ್ಲ ಬದುಕುತ್ತಿದ್ದೇ ವೆಂಬುದನ್ನು ಮರೆಯಬಾರದು. ಆಗ ಈ ಪ್ರೀತಿ-ಪ್ರೇಮಗಳ ಕೃತಕತೆ ಅಥವಾ ಸ್ವಾಭಾ ವಿಕತೆ ಬಗೆಗಿನ ಅರಿವು ವಿಸ್ತಾರವಾಗಬಹುದು.ಆದ್ದರಿಂದ ನಾವು ಹಾಕಿಕೊಳ್ಳುವ ಚೌಕಟ್ಟಿ ನಲ್ಲಿ ನೀತಿಯ ಅಥವಾ ಶೀಲದ ಸ್ವರೂಪ ಇದೇ ರೀತಿಯಲ್ಲಿರಬೇಕೆಂದು ಹೇಳಲಾಗು ವುದಿಲ್ಲ.ಒಂದು ಹಂತದಲ್ಲಿ ಇವರನ್ನು ಗೇಲಿ ಮಾಡುವಲ್ಲಿ ಕಾದಂಬರಿಕಾರರು ಸಫಲರಾಗಿ ದ್ದಾರೆ.ಚಿತ್ರದಲ್ಲಿಯೂ ಸಾಕಷ್ಟುಗಟ್ಟಿಯಾಗಿಯೇ ತಂದಿದ್ದಾರೆ.ಇನ್ನು ಲಕ್ಷ್ಮಿಯದು:ಆಕೆ ಮದುವೆಯಾದವಳು ಬದುಕಿನ ಆಶಯಗಳಲ್ಲಿ ಸುಖವನ್ನು ಕಾಣಲು ಕಾತುರಳಾಗಿರುವಳು ಇದಕ್ಕಾಗಿಯೇ ತನ್ನನ್ನು ಪ್ರೀತಿಸುವ ವ್ಯಕ್ತಿಗೆ ಹೃದಯಬಿಚ್ಚುತ್ತೆ. ರವಿಯ ಜೊತೆಯಲ್ಲಿ ಓಡಾಡುವಾಗಲೆಲ್ಲ ಆ ವ ನ ವ ಳಾ ಗಿ ಪ್ರತಿಸ್ಪಂದಿಸುತ್ತಾಳೆ. ಹಾ ಗೆ ಯೇ ವಿವಾಹದ ಪರಿಧಿಯಲ್ಲಿಯ ಸಾಂಪ್ರದಾಯಿಕ ಶಿಸ್ತಿಗೆ ಬದ್ಧಳೆನ್ನುತ್ತಾಳೆ. ಮತ್ತು ದಿನ ನಿತ್ಯ ತನ್ನ ಸುತ್ತಲೂ ಓಡಾಡದ ಸೇಲ್ಸ್‌ಮನ್ ಗಂಡನ ವಕ್ರತೆಗಳ ನಡುವೆಯೂ ಆತ್ಮೀಯಳಾಗಿರುತ್ತಾಳೆ. ಅಥವಾ ಇರಲು ಬಯಸುತ್ತಾಳೆ. ಮತ್ತು ಬದುಕಿನ ಕೊನೆ ಗಳಿಗೆಯವರೆಗೂ ಪ್ರೀತಿ-ಪ್ರೇಮದ ಹೆಸರಿನಲ್ಲಿ ಈಜಾಡಲು ರವಿಯಂಥವರು ಬರಲಾರದೆ ಹೋಗಬಹುದು-ಎಂಬವ್ಯಾವಹಾರಿಕ ಪ್ರಜ್ಞೆಯಿಂದ ವಂಚಿತಳಾಗಿರುವುದಿಲ್ಲ. ಆದ್ದರಿಂದಲೇ ಲಕ್ಷ್ಮಿ ಹೆಚ್ಚು ತೂಕದ ಹೆಣ್ಣಾಗಿ ಉಳಿಯುತ್ತಾಳೆ. ಆದರೆ ಲಕ್ಷ್ಮಿಯ ಪಾತ್ರದಲ್ಲಿ ವೈಶಾಲಿಯವರು ಬೆಳೆಯದೆ ಹೋಗುತ್ತಾರೆ. ಭಾವನೆಗಳನ್ನೂ ಕೆರಳಿಸದೆ ಇದ್ದಲ್ಲಿಯೇ ಇರುತ್ತಾರೆ.

ಬದುಕಿನ ಕೆಲವು ಸ್ವಾರಸ್ಯಕರ ಅನುಭವಗಳೊಡನೆ, ಅದರ ಎರಡನೆಯ

ಶೂದ್ರ

ಘಟ್ಟಕ್ಕೆ ನೆಗೆಯುವ ರವಿ ಅಧ್ಯಾಪಕನಾಗುವುದು, ಲಕ್ಷ್ಮಿಯ ಸ್ಥಾನದಲ್ಲಿ ತನ ವಿದ್ಯಾರ್ಥಿನಿ ನಂದಿನಿಯನ್ನು ತುಂಬಿಕೊಳ್ಳಲು ಹೋಗುತ್ತಾನೆ. ಅದೇ ಸಮಯದಲ್ಲಿ ಅವನು ಅಧ್ಯಾಪಕನಾಗಿ ಜನಪ್ರಿಯನಾದಂತೆಲ್ಲ ತನ್ನ ಸುತ್ತಲೂ ಆವರಿಸಿರುವ ಕೆಲವು ಘಟನೆಗಳು ಚೆನ್ನಾಗಿದ್ದರೂ ಕೊನೆಗಳಿಗೆಯವರಿಗೂ ನಂದಿನಿ ಪ್ರತಿಸ್ಪಂದಿಸದೇ ಹೋಗುತ್ತಾಳೆ. ಈ ಪಾತ್ರದಲ್ಲಿ ಪದ್ಮಶ್ರೀಯಂತೂ ತುಂಬ ಸಪ್ಪೆಯಾಗಿ ಕಾಣತ್ತಾಳೆ. ಕಾದಂಬರಿಯಲ್ಲಿಯ ಲಕ್ಷ್ಮಿ ಮತ್ತು ನಂದಿನಿಯರ ಆಕರ್ಷಣೆ ಚಿತ್ರದಲ್ಲಿ ಕಾಣದೆ ಹೋಗುತ್ತೆ. ಅದೇನೆ ಇರಲಿ ಕತೆ ಅಥವಾ ಘಟನೆಗಳು ಬೆಳೆಯುವಲ್ಲಿ ಇದು ಮುಚ್ಚಿಕೊಂಡು ಹೋದದ್ದು ನಿರ್ದೇಶಕರ ಜಾಣ್ಮೆಯನ್ನು ತೋರಿಸುತ್ತೆ. ಅದೂ ಅಲ್ಲದೆ ಚಿತ್ರದುದ್ದಕ್ಕೂ ಜಿ. ಎಸ್. ಸದಾಶಿವರವರ ಚುರುಕು ಸಂಭಾಷಣೆ ಚಿತ್ರದ ಎಷ್ಟೋ ದುರ್ಬಲ ಸನ್ನಿವೇಶಗಳಿಗೆ ಜೀವ ತುಂಬುತ್ತಾ ಹೋಗುತ್ತದೆ. ಆದ್ದರಿಂದಲೇ ಚಿತ್ರದುದ್ದಕ್ಕೂ ಮಧ್ಯೆ ಮಧ್ಯೆ ಬರುವ ವಿವರಣೆ ಬೋರ್ ಅನ್ನಿಸುವುದು. (ಇದರಿಂದ ಬೇಸತ್ತ ಪ್ರೇಕ್ಷಕರು ಒಂದೆರಡು ಬಾರಿ "ಹೊಗಯ್ಯ ಸಾಕು, ಏನ್ ಬೋರ್ ಮಾಡ್ತೀಯಾ" ಅನ್ನೋದನ್ನ ತಪ್ಪಿಸಬಹುದಿತ್ತು.)

ರವಿಯು ಪ್ರೀತಿ ಪ್ರೇಮದ ಸಂಘರ್ಷದಲ್ಲಿ ತೊಡಗಿದ್ದರೂ ಬದುಕಿನ ಒಟ್ಟು ಚಲನೆಯಿಂದ ವಂಚಿತನಾಗಲು ಬಯಸುವುದಿಲ್ಲ. ಇದರಿಂದಲೇ ಸದಾಶಿವಯ್ಯನಾಗಲಿ, ನಂದಿನಿಯ ಭಾವನಾಗಲಿ ಹೆಚ್ಚು ಹೆಚ್ಚು ಕ್ರೂರರಾಗಿ ಕಾಣುವುದು. ಚಿತ್ರದ ಬೆಳವಣಿಗೆಯ ದೃಷ್ಟಿಯಿಂದ ವಿಜಯ ಕಾಶಿಗೆ–ಶಿವರಾಮಯ್ಯನ ಮತ್ತು ಶ್ರೀನಾಥನ ಅಭಿನಯ ಬೆಂಬಲವಾಗಿದೆ. ಈ ಸಂದರ್ಭದಲ್ಲಿ ಸದಾಶಿವಯ್ಯ (ಅಧ್ಯಾಪಕ) ನ ಮೂಲಕ ಶಿಕ್ಷಣದ ವೈಪರೀತ್ಯಗಳನ್ನು ಹೊರಗೆಡಹಿರುವುದು ಚೆನ್ನಾಗಿದೆ. ಅದರಲ್ಲೂ ನಮ್ಮ ಅಧ್ಯಾಪಕರಿಗಿರುವ ಕುರುಡು ಇಂಗ್ಲೀಷ್ ವ್ಯಾಮೋಹದ ಬಗ್ಗೆ. ಪಿ. ಎಚ್. ಡಿ. ಪ್ರಬಂಧಗಳನ್ನು ಗೇಲಿ ಮಾಡುವುದರ ಮೂಲಕ ಅವರ ದಡ್ಡತನ ವ್ಯಕ್ತವಾಗಿರುವುದು ಅನಿವಾರ್ಯವಾಗಿದೆ. ಸಿಂದುವಳ್ಳಿ ಅನಂತಮೂರ್ತಿಯವರು ಪಾಠ ಮಾಡುವ ವೈಖರಿ ಮಜಬೂತಾಗಿದೆ.

ಗಿರಾಶ್ ಕಾಸರವಳ್ಳಿಯವರು ಘಟಶ್ರಾದ್ಧದ ನಂತರ ತಮ್ಮ ಮಾಧ್ಯಮದ ಬಗ್ಗೆ ಹೆಚ್ಚು ಹಿಡಿತವನ್ನು ಹೊಂದಿದ್ದಾರೆ ಎನ್ನುವುದಕ್ಕೆ ಈ ಚಿತ್ರ ಅನುಕೂಲವಾಗಬಹುದು. ಬಿ. ವಿ. ಕಾರಂತರ ಸಂಗೀತದಿಂದ ಹೆಚ್ಚು ಅಂಕಗಳು ಬರದಿದ್ದರೂ; ಅದರ ಕೊರತೆಯನ್ನು ಎಸ್. ರಾಮಚಂದ್ರರವರ ಛಾಯಾಗ್ರಹಣ ತುಂಬಿದೆ. ಒಟ್ಟಿನಲ್ಲಿ ಒಂದಷ್ಟು ತಾಂತ್ರಿಕ ದೋಷಗಳನ್ನು ಕುರಿತು ಮಾತಾಡಬಹುದಾದರೂ, ಚಿತ್ರದ ಒಟ್ಟು ಬೆಳವಣಿಗೆ ಮತ್ತು ಒಂದಷ್ಟು ಚುರುಕು ಸಂಭಾಷಣೆಗಳನ್ನು ಮತ್ತೆ ಮತ್ತೆ ನೆನಪು ಮಾಡಿಕೊಳ್ಳುವುದರ ಮೂಲಕ ಚಿತ್ರವನ್ನು ಸಂದರ್ಭ ಬಂದಾಗಲೆಲ್ಲ ನೆನೆಯುತ ಹೋಗಬಹುದು. ●

# ಒಳನೋಟ

## 'ಜರತಾರಿ ಜಗದ್ಗುರು'

ಬೆಳಗಾವಿ ಸಾಹಿತ್ಯ ಸಮ್ಮೇಳನಕ್ಕೆ ಬ.ಕ. ಯವರು ಅಧ್ಯಕ್ಷರಾಗಿ ಆಯ್ಕೆಯಾದಾಗಿನಿಂದ ನಾಡಿನ ಹಲವೆಡೆಗಳಲ್ಲಿ, ಸತ್ಕಾರ ಸಮಾರಂಭ ಸಂದರ್ಶನ ನಡೆಯುತ್ತಿದೆಯಷ್ಟೆ. ಅವರ ಒಟ್ಟು ಎಲ್ಲ ಸಂದರ್ಶನಗಳಲ್ಲಿ ಬಂಡಾಯ ಸಾಹಿತ್ಯದ ಬಗ್ಗೆ ಕುರುಡು ಪ್ರೀತಿ ಹಾಗೂ ದ್ವೇಷಗಳು ವ್ಯಕ್ತವಾಗುತ್ತಿವೆ.

ಬ. ಕ. ಯವರು ಪ್ರಗತಿ ಪಂಥ ಸಾಹಿತ್ಯದ ಅಗ್ರಗಣ್ಯ ಲೇಖಕರಾಗಿ ಯಾವುದೇ ಸಂದರ್ಭದಲ್ಲಿ ಸನ್ಯಾಸಿಯಾಗದೆ ಹೋರಾಟಗಾರರಾಗಿ ನಿಲ್ಲುತ್ತಾರೆ. ತಮ್ಮ ಕಾಲದಲ್ಲಿಯು ಜಾತಿ, ವರ್ಗ ಜಗದ್ಗುರುಗಳ ಮೇಲೆ ಕತ್ತಿ ಝಳಪಿಸುತ್ತಿದ್ದಾರೆ. ಆದರೆ ಈ ಎಲ್ಲಾ ಸಾಮಾಜಿಕ ವಿಷಮತೆಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯನ್ನು ಮೂಲಭೂತವಾಗಿ ವಿರೋಧಿಸಿದವರಲ್ಲ. ಪ್ರಗತಿಪಂಥದ ಸಾಹಿತಿಗಳಿಗೂ ಬಂಡಾಯ ಸಾಹಿತಿಗಳಿಗೂ ಇರುವ ಮೂಲಭೂತ ವ್ಯತ್ಯಾಸ ಇದು.

ಬಂಡಾಯ ಸಾಹಿತಿಗಳು ಪರಂಪರೆಯ ವಿರೋಧಿಗಳು ಎಂದಿದ್ದಾರೆ. ಇವರ ಬಗ್ಗೆ ಬಂಡಾಯ ಸಾಹಿತಿಗಳ ನಿಲುವನ್ನು ಆಗಲೇ ಸ್ಪಷ್ಟಪಡಿಸಿಯಾಗಿದೆ. ಇತಿಹಾಸದಲ್ಲಿ ಬರುವ ಎಲ್ಲ ಚಳುವಳಿಗಳನ್ನು ಆಯಾ ಸಂದರ್ಭ ಹಾಗೂ ಅದರ ಸೈದ್ಧಾಂತಿಕ ಮಿತಿಗಳಲ್ಲೆ ನಾವು ಗುರುತಿಸಿದ್ದೇವೆ. ಯಾವುದೇ ಎಡಪಂಥಿಯ ನಿಲುವನ್ನು ಹೊಂದಿದವರು ಈಗ ಬಂಡಾಯದ ವಿಶಾಲ ವೇದಿಕೆಯಡಿಯಲ್ಲಿ ಬಂದಿದ್ದೇವೆ.

ಬಂಡಾಯದವರು ಬರೀ ಪತ್ರಿಕಾ ಪ್ರಚಾರ ಮಾಡುತ್ತಿದ್ದಾರೆ ಎಂದಿದ್ದಾರೆ ಅರೆ! ಇದೊಳ್ಳೆ ಪ್ರಶ್ನೆಯಾಯಿತಲ್ಲ. ಹಾಗಾದರೆ ನೀವು ಪತ್ರಿಕೆಗಳಿಗೆ ಸಂದರ್ಶನ ಕೊಡುವುದು ಪತ್ರಿಕಾ ಪ್ರಚಾರವಲ್ಲವೆ ?

ಬಂಡಾಯದ ಸಾಹಿತಿಗಳನ್ನು, ಬಂಡಾಯದ ಒಟ್ಟು ಧೋರಣೆ ವಿರೋಧಿಸುವುದು ; ಕಮ್ಯುನಿಸಂನ್ನು ಕುರುಡಾಗಿ ಪ್ರೀತಿಸುವುದು ಇನ್ನೊಂದೆಡೆ ನೆಹರು ಕುಟುಂಬದ ಸತತ ಅಧಿಕಾರವನ್ನು ಪ್ರೀತಿಸುವುದು ಇಂತಹ ವಿರೋಧಾಭಾಸಗಳು ಇವರ ಎಲ್ಲ ಮಾತುಗಳಲ್ಲಿ ಕಾಣಸಿಗುತ್ತವೆ.

ಬುದ್ಧಿಜೀವಿಗಳಿಂದ ಕ್ರಾಂತಿ ಸಾಧ್ಯವಿಲ್ಲ ಎಂದಿದ್ದಾರೆ. ಆದರೆ ದುಡಿಯುವ ಜನತೆಗೆ ಸಿದ್ಧಾಂತ ಮುಟ್ಟಿಸುವುದೂ ಅವರ ಹೋರಾಟಗಳಲ್ಲಿ ತಮ್ಮ ಮಿತಿಯಲ್ಲಿಯೇ

ಪಾಲ್ಗೊಳ್ಳುವುದು, ಅವರ ಉತ್ತಮ ಜೀವನಕ್ಕೆ ಪ್ರೇರೇಪಿಸುವುದು, ಅವರ ಹೋರಾಟಗಳಿಗೆ ಪೂರಕವಾಗಿ ಕೆಲಸ ಮಾಡುವುದು ನಿಜವಾದ ಬುದ್ಧಿಜೀವಿಗಳ ಕೆಲಸ ಅಲ್ಲವೇ ? ಈಗ ಬಂಡಾಯದವರು ಮಾಡುವ ಕೆಲಸವನ್ನು ನಾವು ಯಾವಾಗಲೊ ಮಾಡಿದ್ದೇವೆ ಎಂದು ಕಟ್ಟೀಮನಿಯವರು ಅಪ್ಪಣೆ ಕೊಡಿಸುತ್ತಾರೆ. ಐತಿಹಾಸಿಕ ಚಲನೆಯಲ್ಲಿ ತಮ್ಮ ಸಂದರ್ಭದಲ್ಲಿ ತಮ್ಮ ಮುಂದೆ ಬರುವ ಚಳುವಳಿಗಳನ್ನು, ಆಪಮಯ ಹಾಗೂ ಚಳುವಳಿಯ ಧೋರಣೆಯಲ್ಲಿ ಗುರುತಿಸುವ ನಿಲುವನ್ನು ತಾಳದ ಕಟ್ಟೀಮನಿಯವರು 'ಓಹೋ ಇದನ್ನೋ, ನಾವು ಯಾವಾಗಲೋ ಮಾಡಿದ್ದೇವೆ' ಎನ್ನುವ ಪ್ರತಿಗಾಮಿ ನಿಲುವಿನ ಜಗದ್ಗುರುಗಳಂತೆ ಯಾಕೆ ಮಾತುನಾಡುತ್ತಿದ್ದಾರೆ ಈ ಪ್ರಗತಿ ಪಂಥದ ಸಾಹಿತಿಗಳು !

**ಗುಡಿಹಳ್ಳಿ ನಾಗರಾಜ**
ಧಾರವಾಡ

ಶೂದ್ರ ಮುಖ ಪುಟ ಹಿಡಿದುಕೊಂಡು ಕೊನೆಯವರೆಗೆ, ಚರ್ಚೆಗೆ ಭಿನ್ನಾಭಿಪ್ರಾಯಕ್ಕೆ ಅವಕಾಶ ಇರುವುದರಿಂದ, ತುಂಬಾ ಅರ್ಥ ಪೂರ್ಣ ಎನಿಸುತ್ತದೆ. ಜನವರಿ ಮುಖ ಪುಟದಲ್ಲಿ ಬಂದ ಕಪ್ಪು ದೇಹ ನಮ್ಮಲ್ಲಿ ಹಲವಾರು 'ಕನಸು'ಗಳು ಹುಟ್ಟುವಂತೆ ಮಾಡಿತು. ಇದು ಇಂಡಿಯಾದಲ್ಲೂ ಸಾಧ್ಯವಾಗಬೇಕಲ್ಲವೆ ? ಅಸ್ತವ್ಯಸ್ತಗೊಂಡ ವ್ಯವಸ್ಥೆಯಲ್ಲಿ ನಿರ್ದಯತೆಯಿಂದ ಬಾಡಿದ ದೇಹ ಕಲ್ಲೆತ್ತಿ ಇಲ್ಲಿಯೂ ನಿಲ್ಲುವಂತಾಗಲಿ ಎಂಬ ಆಶಯಗಳೊಡನೆ 'ಶೂದ್ರ' ಬರುತ್ತಿರಲಿ.

ಟಿ. ಪಿ. ಅಶೋಕ್ ಅವರ ಕಾಮೂ ಬಗೆಗಿನ ಲೇಖನ ಅತ್ಯುತ್ತಮವಾಗಿತ್ತು. ಖೊಮೇನಿ ಸಂದರ್ಶನ ಕೂಡ.

**ಹೆಚ್. ಆರ್. ಬಾಲಕೃಷ್ಣ ಶೆಟ್ಟಿ**
**ಬಿ. ವಿ. ರಾಮಸ್ವಾಮಿ**
ರಾಮದುರ್ಗ

'ಶೂದ್ರ' ಸಂಚಿಕೆಯಿಂದ ಸಂಚಿಕೆಗೆ ಇಂಪ್ರೂವ್ ಆಗುತ್ತ ಇದೆ. ಹೆಚ್ಚು ಹೆಚ್ಚು ವೈಚಾರಿಕಾ ಲೇಖನಗಳನ್ನು, ಭಾಷಾಂತರವಾದರೂ ಪ್ರಕಟಿಸುತ್ತಿದೆ. ಕಲೆ–ಸಾಹಿತ್ಯ ಸಂಸ್ಕೃತಿಯ ದಟ್ಟ ಧೋರಣೆಯುಳ್ಳದ್ದಾಗಿದೆ.

**ಕೆ. ಎಸ್. ಭಗವಾನ್**
ಮೈಸೂರು

KRNB 214 76-77

No. M (2) PRB 211/73-74




J. Sreenivas Murthy
No. 18, 3rd cross
Kodandram puram
Bangalore. 3

*With best compliments from :*

- DECCAN HERALD
- PRAJAVANI
- MAYURA
- SUDHA

**The Printers (Mysore) Limited**

16, Mahatmagandhi Road, BANGALORE-560 001

Printed at CHAITRA PRINTERS, Shankarmutt Road. Bangalore-4
Publisher & Editor : M. SRINIVAS